ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೪೩

# ಕೌಟಿಲ್ಯ

ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.






[illegible]ಂಟಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೩

ಬೆಲೆ: ೪ ಆಣೆ

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ-
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಬಿ.ಎಸ್‌ಸಿ.
೨. ಸಮಾಜದ ಕೋಗೆ ರುಚಿನಗಳು-
ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ- ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು-ಎಚ್. ಸುಬ್ಬಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು-ಜಿ. ಎನ್. ಕೃಷ್ಣಮೂರ್ತಿ, ಎಂ.ಎ.
೬. ಕುಮಾರವ್ಯಾಸ-ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ-ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡಸಾಹಿತ್ಯ-ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ-ಬಿ. ಎ. ಕೃಷ್ಣಸ್ವಾಮಿರಾವ್,
ಎಂ.ಎಸ್‌ಸಿ.
೧೦. ಪಂಪ-ತೀ. ನಂ. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ-ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು-ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆ-ನಾ. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ-ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ-ಕೆ. ಶೇಷಾದ್ರಿ ಅಯ್ಯಂಗಾರ್,
ಎಂ.ಎಸ್‌ಸಿ., ಎಲ್.ಎಲ್.ಬಿ.
೧೬. ಬೆಳಕು-ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕರ್ನಾಟಕ ಕಾದಂಬರಿ-ವಿ. ಸೀತಾರಾಮಯ್ಯ, ಎಂ.ಎ.

---

ಸೋಲ್ ಏಜೆಂಟ್:

ಎಂ. ಆರ್. ಲಕ್ಷ್ಮೀನಾರಾಯಣ,

ಬುಕ್‌ಸೆಲರ್, ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್, ಮೈಸೂರು

# ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೪೩

# ಕೌಟಿಲ್ಯ

ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೩

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚುವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ.. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು;

ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು,
ತಾ|| ೨೪-೪-೧೯೪೨.

**ಇ. ಜಿ. ಮೆಕಾಲ್ಪೈನ್**
ವೈಸ್-ಛಾನ್ಸೆಲರ್

# ಅರಿಕೆ

ಕೌಟಿಲ್ಯನ ಅರ್ಥಶಾಸ್ತ್ರವು ಮೋಸ ಮತ್ತು ಕುಟಿಲತನಕ್ಕೆ ತವರುಮನೆ ಎಂಬ ಅಪವಾದ ಸಾಮಾನ್ಯವಾಗಿದೆ. ಯೂರೋಪಿನಲ್ಲಿ ಮೆಕಿಯವೆಲ್ಲಿ ಎಂಬ ರಾಜನೀತಿಜ್ಞನ ವಿಷಯದಲ್ಲೂ ಇದೇ ವಿಧವಾದ ತಪ್ಪು ತಿಳಿವಳಿಕೆ ಇದೆ. ದುಷ್ಟರನ್ನೂ ಮೋಸಗಾರರನ್ನೂ ಸಾಧುಮಾರ್ಗದಿಂದ ಮೂಲೋತ್ಪಾಟನ ಮಾಡುವುದು ಸಾಧ್ಯವಿಲ್ಲವೆನ್ನುವುದು ಇವರ ಅಭಿಮತ. ಕಪಟಿಗಳ ವಿಷಯದಲ್ಲಿ ಕಾಪಟ್ಯವನ್ನು ಆಚರಿಸುವುದೇ ಸರಿಯಾದ ನೀತಿ ಎಂದು ಇವರು ಘೋಷಿಸಿರುತ್ತಾರೆ. ದುಷ್ಟರನ್ನು ಮಟ್ಟಹಾಕುವುದಕ್ಕೆ ಮಾಡುವ ತಂತ್ರವನ್ನು ಶಿಷ್ಟರ ವಿಚಾರದಲ್ಲೂ ಉಪಯೋಗಿಸಬೇಕೆಂದು ಇವರು ಹೇಳಿಲ್ಲ. ಕಾವೂರನು ಹೇಳುವಂತೆ ರಾಷ್ಟ್ರದ ಕ್ಷೇಮಚಿಂತನೆಯಿಂದಲೂ ಪುರೋಭಿವೃದ್ಧಿಯ ದೃಷ್ಟಿಯಿಂದಲೂ ರಾಜಕಾರ್ಯಪ್ರವೀಣರು ಮಾಡುವ ಕೆಲಸಗಳನ್ನು ಸಾಮಾನ್ಯರಾದ ನಾವು ಮಾಡಿದ್ದೇ ಆದರೆ ಪರಮ ನೀಚರೆನಿಸಿಕೊಳ್ಳುವೆವು. ಕೌಟಿಲ್ಯನ ಅರ್ಥಶಾಸ್ತ್ರವನ್ನು ಓದುವಾಗ ಇದನ್ನು ಜ್ಞಾಪಕದಲ್ಲಿಡಬೇಕು.

ಕೌಟಿಲ್ಯನ ದಂಡನೀತಿಯನ್ನು ಕುರಿತು ನಾನು ಶಿವಮೊಗ್ಗೆಯಲ್ಲಿ ಮಾಡಿದ ಪ್ರಚಾರೋಪನ್ಯಾಸವನ್ನು ಇಲ್ಲಿ ಸ್ವಲ್ಪ ವಿಸ್ತರಿಸಿ ಬರೆದಿರುತ್ತೇನೆ. ಇದರ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಪರಿಷ್ಕರಿಸಿದುದಕ್ಕಾಗಿ ಸಂಪಾದಕರಿಗೂ ಸಂಪಾದಕೀಯಮಂಡಲಿಯವರಿಗೂ, ಅಚ್ಚಿನ ಕರಡುಪ್ರತಿಯನ್ನು ಓದಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟದ್ದಕ್ಕಾಗಿ ಶ್ರೀಮಾನ್ ಎಚ್. ಎಲ್. ಹರಿಯಪ್ಪನವರಿಗೂ ನಾನು ಕೃತಜ್ಞನಾಗಿರುತ್ತೇನೆ.

ಎಂ. ವಿ. ಕೃಷ್ಣರಾವ್

# ವಿಷಯಾನುಕ್ರಮಣಿಕೆ

# ಕೌಟಿಲ್ಯ

## ೧. ಪ್ರವೇಶ

ಹಿಂದೂ ರಾಜಕೀಯವು ಅತಿ ಪುರಾತನವಾದುದು. ಇದರ ಮೂಲತತ್ತ್ವಗಳು ಋಗ್ವೇದದ ಕಾಲದಲ್ಲೇ ಸ್ಪಷ್ಟವಾಗಿ ನಮಗೆ ಗೋಚರವಾಗುವುವು. ಸ್ಮೃತಿ ಮತ್ತು ಪುರಾಣಗಳಲ್ಲಿ ರಾಜಕೀಯ ವಿಷಯಗಳನ್ನು ವಿವರಿಸುವ ಶಾಸ್ತ್ರಕ್ಕೆ ದಂಡನೀತಿ ಅಥವಾ ರಾಜನೀತಿ ಎಂದು ಹೆಸರು. ಆದರೆ ಸ್ಮೃತಿಗಳಲ್ಲೂ ಪುರಾಣಗಳಲ್ಲೂ ರಾಜನೀತಿಯು ಧರ್ಮಶಾಸ್ತ್ರದೊಂದಿಗೆ ಬೆರತಿದೆ. ದಂಡನೀತಿಯೊಂದನ್ನೇ ಪೂರ್ಣವಾಗಿ ವಿವರಿಸುವ ಅತಿ ಪ್ರಾಚೀನಗ್ರಂಥವೆಂದರೆ ಕೌಟಿಲ್ಯನ ಅರ್ಥಶಾಸ್ತ್ರ. ಇದಕ್ಕಿಂತಲೂ ಹಿಂದೆ ಈ ವಿಚಾರವಾಗಿ ಅನೇಕ ದಂಡನೀತಿ ಗ್ರಂಥಗಳು ಇದ್ದುವೆಂದು ಅರ್ಥಶಾಸ್ತ್ರವೇ ತಿಳಿಸುತ್ತದೆ. ಕೌಟಿಲ್ಯನು ತನಗಿಂತಲೂ ಹಿಂದಿನ ದಂಡನೀತಿಕಾರರಾದ ಬೃಹಸ್ಪತಿ, ಭಾರದ್ವಾಜ, ವಾತವ್ಯಾಧಿ, ಪಿಶುನ ಮೊದಲಾದವರ ಮತಗಳನ್ನು ವಿಮರ್ಶೆಮಾಡಿ ತನ್ನ ಮತವನ್ನು ಅರ್ಥಶಾಸ್ತ್ರದಲ್ಲಿ ಸ್ಥಾಪಿಸಿದ್ದಾನೆ. ರಾಜನೀತಿಗ್ರಂಥಗಳಲ್ಲೆಲ್ಲಾ ಕೌಟಿಲ್ಯನ ಅರ್ಥಶಾಸ್ತ್ರವು ಅತಿ ಮುಖ್ಯವಾದುದು. ಅದಕ್ಕಿಂತಲೂ ಹಿಂದೆ ರಾಜಧರ್ಮದ ವಿಚಾರವಾಗಿ ನಡೆಸಿದ್ದ ಸಂಶೋಧನೆ ಮತ್ತು ವಿಮರ್ಶೆಗಳ ಸಾರ ಅದರಲ್ಲಿ ಕ್ರೋಡೀಕೃತವಾಗಿದೆ. ಆದುದರಿಂದ ಈಚಿನ ರಾಜನೀತಿಗ್ರಂಥಗಳಿಗೆಲ್ಲಾ ಅದು ಆಧಾರ.

ಅರ್ಥಶಾಸ್ತ್ರವು ಪ್ರಕಾಶಕ್ಕೆ ಬಂದಮೇಲೆ ಹಿಂದೂರಾಜನೀತಿಯ ವಿಚಾರದಲ್ಲಿ ಪಾಶ್ಚಾತ್ಯರಿಗಿದ್ದ ಅನೇಕ ತಪ್ಪು ಅಭಿ

ಪ್ರಾಯಗಳು ತೊಲಗಿ ರಾಜಕೀಯದಲ್ಲಿ ಹಿಂದುಗಳು ಬಹಳ ಆಳ ವಾಗಿ ಪ್ರವೇಶಿಸಿದ್ದರೆಂದು ಸ್ಪಷ್ಟವಾಯಿತು. ಈ ಮಹಾ ಗ್ರಂಥ ವನ್ನು ಬೆಳಕಿಗೆ ತಂದ ಡಾ|| ಆರ್. ಶಾಮಶಾಸ್ತ್ರಿಗಳು ಮೈಸೂರಿಗೆ ಒಂದು ದೊಡ್ಡ ಕೀರ್ತಿಯನ್ನು ಗಳಿಸಿರುತ್ತಾರೆ. ಇವರು ೧೯೦೫ ರಲ್ಲಿ ತಂಜಾವೂರಿನ ಕಡೆಯ ಪಂಡಿತರೊಬ್ಬರಿಂದ ಕೈಬರಹದ ಪ್ರತಿಯೊಂದನ್ನು ಸಂಪಾದಿಸಿ ಅದನ್ನು ಇಂಗ್ಲೀಷಿಗೆ ಭಾಷಾಂತರ ಮಾಡಿ ೧೯೧೫ರಲ್ಲಿ ಪ್ರಕಟಿಸಿದರು. ಅದೇ ಕಾಲದಲ್ಲಿ ಡಾ|| ಟಿ. ಗಣಪತಿಶಾಸ್ತ್ರಿಗಳು ತ್ರಿವೇಂದ್ರಮಿನ "ಓರಿಯಂಟಲ್ ಸೀರಿಸ್" ಎಂಬ ಪ್ರಾಚ್ಯ ಪುಸ್ತಕಮಾಲೆಯಲ್ಲಿ ಸಂಸ್ಕೃತ ಪ್ರತಿಯನ್ನು ಅಚ್ಚು ಹಾಕಿಸಿದರು. ಅಲ್ಲದೆ ಡಾ|| ಜಾಲಿಯ ವರು ಪಂಜಾಬಿನ ಸಂಸ್ಕೃತ ಗ್ರಂಥಮಾಲೆಯಲ್ಲಿ ಇವರ ಇನ್ನೊಂದು ಸಂಸ್ಕರಣವನ್ನು ಪ್ರಚುರಪಡಿಸಿದರು. ಅಲ್ಲಿಂದೀ ಚೆಗೆ ಕೌಟಲ್ಯನನ್ನು ಕುರಿತು ಅನೇಕ ವಿಮರ್ಶಾತ್ಮಕವಾದ ಗ್ರಂಥಗಳೂ ಲೇಖನಗಳೂ ಹೊರಬಿದ್ದಿವೆ. ಇವೆಲ್ಲವರ ಪರಿ ಣಾಮವಾಗಿ ಪ್ರಪಂಚದ ರಾಜನೀತಿಜ್ಞರ ಕಣ್ಣು ತೆರೆಯಿತು. ಈ ಗ್ರಂಥವನ್ನು ಪಾಶ್ಚಾತ್ಯದೇಶಗಳ ಅನೇಕ ರಾಜಕಾರ್ಯ ಪಟುಗಳು ಬಹಳ ಆಸಕ್ತಿಯಿಂದ ಓದಿ ಉಪಯೋಗ ಪಡೆ ದಿದ್ದಾರೆ ಮತ್ತು ಪಡೆಯುತ್ತಲೂ ಇದ್ದಾರೆ. ಹಿಟ್ಲರ್ ಮತ್ತು ಮುಸೊಲಿನಿಯರಂತಹ ವಿಧಾಯಕರೂ ಸಹ ಮ್ಯಾಕೆವೆಲ್ಲಿಯ "ಪ್ರಿನ್ಸ್" ಮತ್ತು ಕೌಟಿಲ್ಯನ ಅರ್ಥಶಾಸ್ತ್ರ, ಇವುಗಳಿಂದ ವಿಶೇಷವಾದ ಸ್ಫೂರ್ತಿಯನ್ನು ಪಡೆದಿರಬಹುದೆಂದು ಊಹಿಸ ಬಹುದಾಗಿದೆ.

ಅರ್ಥಶಾಸ್ತ್ರದ ಕರ್ತೃವು ಯಾರೆಂಬ ವಿಚಾರದಲ್ಲಿ ತೀವ್ರ ವಾದ ಭಿನ್ನಾಭಿಪ್ರಾಯಗಳಿವೆ. ಕೌಟಿಲ್ಯ ಎಂಬುದು ಗ್ರಂಥ

ಕರ್ತನ ಅಡ್ಡ ಹೆಸರಿರಬಹುದು, ಅಥವಾ ಕೌಟಿಲ್ಯ ಎಂಬುದು ಸಂಪ್ರದಾಯವಾಗಿ ಕೊಟ್ಟ ಹೆಸರು, ಮತ್ತು ಅದು ಗ್ರಂಥ ಕರ್ತನ ಕುಟಿಲತ್ವವನ್ನು ಸೂಚಿಸುವ ಚಿಹ್ನೆಯಾಗಿರಬಹುದು. ಗ್ರಂಥದಲ್ಲಿ ಕುಟಿಲೋಪಾಯಗಳೂ ದುಷ್ಟಪದ್ಧತಿಗಳೂ ವರ್ಣಿತವಾಗಿರುವುದರಿಂದ ಒಬ್ಬ ಕುಟಿಲಮಂತ್ರಿಯೇ ಇದನ್ನು ರಚಿಸಿರಬೇಕೆನ್ನುವುದು ಒಂದು ವಾದ. ಗ್ರಂಥಕರ್ತನು ಚಂದ್ರ ಗುಪ್ತಮೌರ್ಯನ ಮಂತ್ರಿಯಾಗಿಯೂ ಪ್ರಸಿದ್ಧನಾಗಿಯೂ ಇದ್ದಲ್ಲಿ ಚಂದ್ರಗುಪ್ತನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸನು ತನ್ನ "ಇಂಡಿಕಾ" ಎಂಬ ಪುಸ್ತಕದಲ್ಲಿ ಇವನ ಹೆಸರನ್ನು ಹೇಳದೆ ಇರುತ್ತಿದ್ದನೆ? ಅವನು ಅರ್ಥಶಾಸ್ತ್ರದ ಹೆಸರನ್ನಾಗಲೀ ಅಥವಾ ಅದರ ಕರ್ತೃವಾದ ಕೌಟಿಲ್ಯನ ಹೆಸರನ್ನಾಗಲೀ ಹೇಳದಿರುವುದರಿಂದ "ಕೌಟಿಲ್ಯ" ಎಂಬುದು ವ್ಯಂಗ್ಯ ನಾಮವೇ ಹೊರತು ವ್ಯಕ್ತಿನಾಮವ (ನಿಜವಾದ ಗ್ರಂಥಕರ್ತನ ಹೆಸರ)ಲ್ಲ. ಇದು ವಿಂಟರ್‌ನಿಟ್ಸ್ ಮೊದಲಾದ ಪಂಡಿತರ ಅಭಿಪ್ರಾಯ.

ಅರ್ಥಶಾಸ್ತ್ರವನ್ನು ಬರೆದವನು ಕೌಟಿಲ್ಯನೆಂಬ ಬ್ರಾಹ್ಮಣ ನೆಂಬುದಕ್ಕೆ ಕೆಲವು ಆಧಾರಗಳಿವೆ. ಕೌಟಿಲ್ಯನೆಂಬ ಬ್ರಾಹ್ಮಣನು ನವನಂದರನ್ನು ನಿರ್ಮೂಲಮಾಡಿ ಚಂದ್ರಗುಪ್ತನನ್ನು ಸಾರ್ವ ಭೌಮಪದವಿಗೆ ಏರಿಸಿದನೆಂದು ವಿಷ್ಣುಪುರಾಣದಲ್ಲಿ ಹೇಳಿದೆ. ನೀತಿಶಾಸ್ತ್ರವನ್ನು ಬರೆದ ಕಾಮಂದಕನ ಹೇಳಿಕೆಯೂ ಇದನ್ನೇ ಸಮರ್ಥಿಸುತ್ತದೆ. ದಂಡಿಯು ತನ್ನ ದಶಕುಮಾರಚರಿತೆಯಲ್ಲಿ ವಿಷ್ಣುಗುಪ್ತನೆಂಬ ಬ್ರಾಹ್ಮಣನು ಮೌರ್ಯರ ಉಪಯೋಗಕ್ಕಾಗಿ ಹಿಂದಿನ ಅರ್ಥಶಾಸ್ತ್ರಗಳ ಸಾರರೂಪವಾದ ಆರುಸಾವಿರ ಶ್ಲೋಕ ಗಳುಳ್ಳ ಅರ್ಥಶಾಸ್ತ್ರಗ್ರಂಥವನ್ನು ರಚಿಸಿದನೆಂದು ಹೇಳಿದ್ದಾನೆ.

ಬಾಣನು ಕೌಟಿಲ್ಯನ ಅರ್ಥಶಾಸ್ತ್ರವು ಕುಟಿಲನೀತಿ ಎಂದು ಹೇಳಿದ್ದಾನೆ. ಪಂಚತಂತ್ರದ ಕರ್ತೃವೂ ಕೂಡ ಅರ್ಥಶಾಸ್ತ್ರವನ್ನು ಬರೆದವನು ಚಾಣಕ್ಯನೆಂಬ ಬ್ರಾಹ್ಮಣನೆಂದು ತಿಳಿಸಿದ್ದಾನೆ.

ಕೌಟಿಲ್ಯನ ಹೆಸರಿನ ವಿಚಾರವಾಗಿ ಇನ್ನೂ ಕೆಲವು ಊಹೆಗಳಿವೆ. ಕುಟಿಲಗೋತ್ರದವನಾದುದರಿಂದ ಅರ್ಥಶಾಸ್ತ್ರದ ಗ್ರಂಥಕರ್ತನಿಗೆ ಕೌಟಿಲ್ಯನೆಂಬ ಹೆಸರು ಬಂದಿತೆಂದೂ ಚಣಕವೆಂಬ ಪಟ್ಟಣದಲ್ಲಿ ಹುಟ್ಟಿದುದರಿಂದ ಚಾಣಕ್ಯನೆಂದೂ ವಿಷ್ಣುಗುಪ್ತನೆಂಬುದು ತಂದೆತಾಯಿಗಳು ಇಟ್ಟ ಹೆಸರೆಂದೂ ಡಾ|| ಗಣಪತಿ ಶಾಸ್ತ್ರಿಗಳ ಊಹೆ. ಒಟ್ಟಿನಲ್ಲಿ ಕೌಟಿಲ್ಯನು ಕಾಲ್ಪನಿಕ ವ್ಯಕ್ತಿಯಲ್ಲ; ಚಂದ್ರಗುಪ್ತನ ಕಾಲದ ಇತಿಹಾಸದಲ್ಲಿ ಅತ್ಯಂತ ಮುಖ್ಯಪಾತ್ರವನ್ನು ವಹಿಸಿದ್ದ ವ್ಯಕ್ತಿ ಎಂಬುದು ಆಧುನಿಕ ವಿದ್ವಾಂಸರನೇಕರ ಅಭಿಮತ.

ಕೌಟಿಲ್ಯನ ಅರ್ಥಶಾಸ್ತ್ರವು ಬಹುದೊಡ್ಡ ಗ್ರಂಥ. ಇದು ಹದಿನೈದು ಅಧಿಕರಣಗಳಾಗಿಯೂ, ನೂರೈವತ್ತು ಪ್ರಕರಣಗಳಾಗಿಯೂ ವಿಭಾಗಿಸಲ್ಪಟ್ಟಿದೆ. ದಂಡನೀತಿಯ ಸ್ವರೂಪ, ದಂಡನೀತಿಗೂ ಇತರ ಶಾಸ್ತ್ರಗಳಿಗೂ ಇರುವ ಸಂಬಂಧ, ರಾಜನ ವಿದ್ಯಾಭ್ಯಾಸ, ಮಂತ್ರಿಗಳ ಮತ್ತು ಅಧಿಕಾರಿಗಳ ಕರ್ತವ್ಯ, ರಾಜ್ಯಾಡಳಿತದ ವ್ಯವಸ್ಥೆ, ವ್ಯವಸಾಯ ವಾಣಿಜ್ಯ ಮುಂತಾದ ಆರ್ಥಿಕವ್ಯವಸ್ಥೆ, ಯುದ್ಧ ಮತ್ತು ಶಾಂತಿನೀತಿ, ರಾಜ್ಯಾಂಗಗಳು, ಪ್ರಭುತ್ವದ ಏಳಿಗೆ ಮತ್ತು ಅಳಿವು—ಹೀಗೆ ರಾಜ್ಯಶಾಸ್ತ್ರದ ಎಲ್ಲ ಅಂಶಗಳೂ ಇಲ್ಲಿ ಅಡಕವಾಗಿವೆ. ಒಂದೊಂದು ಅಧಿಕರಣದ ಮೇಲೂ ಒಂದೊಂದು ಪುಸ್ತಕವನ್ನು ಬರೆಯಬಹುದು. ಆದರೆ ಇಲ್ಲಿ ದೊರೆತಿರುವ ಸ್ವಲ್ಪ ಅವಕಾಶದಲ್ಲಿ ಎಲ್ಲವನ್ನೂ ವಿವರಿಸುವುದು ಸಾಧ್ಯವಿಲ್ಲ. ಅಲ್ಲದೆ ಗ್ರಂಥದ

ಎಲ್ಲ ಅಂಶಗಳಲ್ಲೂ ಎಲ್ಲರಿಗೂ ಆಸಕ್ತಿ ಇರುವುದಿಲ್ಲ. ಆದುದರಿಂದ ಮುಖ್ಯವಾಗಿ ರಾಷ್ಟ್ರದ ಸ್ವರೂಪ, ರಾಷ್ಟ್ರದ ಉದ್ದೇಶ, ರಾಷ್ಟ್ರದ ಸಪ್ತಾಂಗಗಳು, ಅವುಗಳಿಗಿರುವ ಪರಸ್ಪರ ಸಂಬಂಧ, ಮಂತ್ರಾಲೋಚನೆ, ಆಡಳಿತಕ್ರಮ, ಸಾಮಾಜಿಕ ಜೀವನದ ವ್ಯವಸ್ಥೆ—ಇವುಗಳನ್ನು ಮಾತ್ರ ವಿವರಿಸಲಾಗಿದೆ. ಯುದ್ಧದ ರೀತಿನೀತಿಗಳನ್ನೂ ಕುಟಿಲತಂತ್ರೋಪಾಯಗಳನ್ನೂ ಕೌಟಿಲ್ಯನು ಅನೇಕ ಪ್ರಕರಣಗಳಲ್ಲಿ ವಿವರಿಸಿದ್ದರೂ, ಇಲ್ಲಿ ಅವುಗಳ ಗೋಜಿಗೆ ಕೈಹಾಕಿಲ್ಲ.

ಮೌರ್ಯರಾಜ್ಯವು ಸ್ಥಾಪನೆಯಾಗುವುದಕ್ಕೆ ಮುಂಚೆ ಉತ್ತರ ಹಿಂದೂಸ್ಥಾನದಲ್ಲಿ ಯಾವ ಪ್ರಬಲರಾಜ್ಯಗಳೂ ಇರಲಿಲ್ಲ. ರಾಜರು ರಾಗದ್ವೇಷಗಳಿಗೆ ಒಳಗಾಗಿ ಒಬ್ಬರೊಡನೊಬ್ಬರು ಕಾದಾಡಿ ಪರಸ್ಪರ ಪ್ರಭುಶಕ್ತಿಗೆ ಕಂಟಕಪ್ರಾಯರಾಗಿದ್ದರು. ಪ್ರಜಾಸತ್ತಾತ್ಮಕವಾದ "ಗಣ" ಗಳಲ್ಲಿಯೂ ಕೂಡ ಐಕಮತ್ಯವಿರಲಿಲ್ಲ. ಇದೆಲ್ಲದರ ಪರಿಣಾಮವಾಗಿ ಇವರ ಪ್ರಭುಶಕ್ತಿ ಕುಗ್ಗಿ ಯವನರಾಜನಾದ ಅಲೆಕ್ಸಾಂಡರನಿಗೆ ಸೋತರು. ಹಿಂದೂದೇಶದಮೇಲೆ ಅಲೆಕ್ಸಾಂಡರನು ಕೇವಲಮೂರೇ ವರ್ಷಗಳಕಾಲ ದಂಡಯಾತ್ರೆ ನಡೆಸಿದನಾದರೂ, ಅದು ಹಿಂದೂ ರಾಜಕೀಯದಮೇಲೆ ವಿಶೇಷ ಪರಿಣಾಮಕಾರಿಯಾಯಿತು. ಈ ದಂಡಯಾತ್ರೆಯಿಂದ ದೇಶದಾದ್ಯಂತವೂ ತಲ್ಲಣಿಸಿತು. ಹಿಂದೂದೇಶದವರನ್ನು ಒಟ್ಟು ಕೂಡಿಸಿ ಆಳುವ ಪ್ರಬಲವಾದ ಪ್ರಭುತ್ವವಿಲ್ಲದಿದ್ದರೆ ಹಿಂದುಗಳು ಪರರಾಜರಿಗೆ ಸೋತು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವರೆಂಬುದು ವಿಶದವಾಯಿತು. ಪ್ರಬಲವಾದ ಸಾಮ್ರಾಜ್ಯವನ್ನು ಕಟ್ಟಲು ಶಕ್ತನೊಬ್ಬನು ದೊರೆತುದಾದರೆ ಅವನಿಗೆ ತಲೆಬಾಗಿ ಬಾಳಲು ಜನರು ಸಿದ್ಧರಾದರು.

ಕೌಟಿಲ್ಯನ ರಾಜನೀತಿ ಹುಟ್ಟಿದುದು ಈ ಪರಿಸ್ಥಿತಿಯಲ್ಲಿ. ಅವನ ತತ್ವವು ಆ ಕಾಲದ ಜನರ ರಾಜಕೀಯ ಮನೋಭಾವ ಮತ್ತು ವರ್ತನೆಯ ಪ್ರತಿಬಿಂಬ. ಕೌಟಿಲ್ಯನು ಬರಿಯ ತತ್ವಜ್ಞಾನಿ ಮಾತ್ರವೇ ಅಲ್ಲ; ಅಸದೃಶನಾದ ರಾಜ್ಯನಿರ್ಮಾಪಕನೂ ಆಗಿದ್ದನು. ವೀರನೂ ಧೀರೋದಾತ್ತನೂ ಆದ ಚಂದ್ರಗುಪ್ತನಿಗೆ ಇಂತಹ ರಾಜಮಂತ್ರ ನಿಪುಣನು ದೊರೆತುದರಿಂದ ಪ್ರಬಲವಾದ ಮೌರ್ಯಸಾಮ್ರಾಜ್ಯವು ಸಿದ್ಧಿಸಿತು. ಕೌಟಿಲ್ಯನ ತತ್ವಗಳು ಶುಷ್ಕ ತತ್ವಗಳಾಗದೆ ರಾಜಕೀಯದಲ್ಲಿ ಕಾರ್ಯಕಾರಿಯಾದ ತತ್ವಗಳಾದವು.

---

## ೨. ಅರ್ಥಶಾಸ್ತ್ರದ ಸ್ವರೂಪ

ಶಾಸ್ತ್ರಗಳನ್ನು ತ್ರಯೀ, ಆನ್ವೀಕ್ಷಿಕೀ, ವಾರ್ತಾ, ಮತ್ತು ದಂಡನೀತಿ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸುವುದು ಪ್ರಾಚೀನ ಸಂಪ್ರದಾಯ. ಆದರೆ ದಂಡನೀತಿಕಾರರೆಲ್ಲರೂ ಈ ವಿಭಜನೆಯನ್ನು ಒಪ್ಪುವುದಿಲ್ಲ. ಮನುವು ತ್ರಯೀ, ವಾರ್ತಾ, ಮತ್ತು ದಂಡನೀತಿ ಇವೇ ಮುಖ್ಯವೆಂದೂ, ಬೃಹಸ್ಪತಿಯು ವಾರ್ತಾ ಮತ್ತು ದಂಡನೀತಿಗಳೇ ಮುಖ್ಯವಾದುವೆಂದೂ, ಶುಕ್ರನು ದಂಡನೀತಿಯೊಂದೇ ಮುಖ್ಯವಾದ ಶಾಸ್ತ್ರವೆಂದೂ ವಾದಿಸಿರುತ್ತಾರೆ. ಕೌಟಿಲ್ಯನು ಈ ಮೂವರು ತತ್ವಜ್ಞರ ಸಿದ್ಧಾಂತಗಳನ್ನೂ ವಿಮರ್ಶೆ ಮಾಡಿ, ಅವುಗಳನ್ನು ಖಂಡಿಸಿದ್ದಾನೆ. ಪೂರ್ವಸಂಪ್ರ

ದಾಯದಂತೆ ಶಾಸ್ತ್ರಗಳನ್ನು ನಾಲ್ಕುಭಾಗಗಳಾಗಿ ವಿಭಜಿಸುವುದೇ ಸಾಧು ಎಂದು ಅವನ ಸಿದ್ಧಾಂತ. ತತ್ತ್ವಶಾಸ್ತ್ರ (ಆನ್ವೀಕ್ಷಿಕೀ)ವು ಕಾರ್ಯಕಾರಣಗಳ ತಿಳಿವನ್ನು ಬಲಪಡಿಸುವುದು; ಕ್ಲೇಶಗಳಿಗೆ ಈಡಾಗದಂತೆ ಮನಸ್ಸನ್ನು ಹದಗೊಳಿಸುವುದು. ವೇದಗಳು ಧರ್ಮಾಧರ್ಮದ ತಿಳಿವಳಿಕೆಯನ್ನುಂಟುಮಾಡುವುವು; ವರ್ಣಾಶ್ರಮಧರ್ಮಗಳಿಗನುಗುಣವಾಗಿ ನಡೆಯುವುದರಿಂದ ಉಂಟಾಗುವ ಪ್ರಯೋಜನ ಅಥವಾ ಅವುಗಳನ್ನು ಮೀರಿದರೆ ಒದಗುವ ವಿಪತ್ತು, ಇವುಗಳನ್ನು ತಿಳಿಸುವುವು. ಕೃಷಿ, ಪಶುಪಾಲನೆ, ಕೈಗಾರಿಕೆಗಳನ್ನು ವೃದ್ಧಿಗೊಳಿಸಿ ದೇಶವನ್ನು ಸಂಪದ್ಯುಕ್ತವನ್ನಾಗಿ ಮಾಡುವುದು ಹೇಗೆಂಬುದನ್ನು ತಿಳಿಸುವುದು ವಾರ್ತಾ. ಆಡಳಿತದ ರೀತಿನೀತಿಗಳನ್ನು ತಿಳಿಸುವುದು ದಂಡನೀತಿ ಅಥವಾ ಅರ್ಥಶಾಸ್ತ್ರ.

ಸಕಲ ಇಷ್ಟಾರ್ಥ ಸಿದ್ಧಿಗಳಿಗೂ ದಂಡನೀತಿಯು ಕಾರಣಭೂತವಾದುದು. ಸುವ್ಯವಸ್ಥಿತವಾಗಿಯೂ ಸ್ವತಂತ್ರವಾಗಿಯೂ ಇರುವ ರಾಜ್ಯದಲ್ಲಿ ಮಾತ್ರ ವರ್ಣಾಶ್ರಮಗಳ ಆಚರಣೆ, ಐಶ್ವರ್ಯಾಭಿವೃದ್ಧಿ, ಜನರ ಪ್ರಾಣ ಮತ್ತು ಆಸ್ತಿಪಾಸ್ತಿಗಳ ಸಂರಕ್ಷಣೆ-ಇವು ಸಾಧ್ಯ. ಧರ್ಮ, ಅರ್ಥ, ಕಾಮ ಮೋಕ್ಷಗಳೆಲ್ಲವೂ ದಂಡಧರನ ಭುಜದ ಮೇಲೆ ನಿಂತಿವೆ. ಅವನ ಭುಜಗಳು ಭದ್ರವಾಗಿರುವವರೆಗೆ ಅವುಗಳೂ ಭದ್ರವಾಗಿರುವುವು. ಅವನ ಭುಜಬಲ ಸಡಿಲಿದರೆ ಇವೆಲ್ಲವೂ ಕುಸಿದುಬೀಳುವುವು. ಹೀಗೆಂದರೆ ದಂಡದ ಬೆದರಿಕೆ ಅಥವಾ ಬರಿಯ ಬಲ ಪ್ರಯೋಗದಿಂದಲೇ ಆಡಳಿತ ನಡೆಸಬೇಕೆಂಬುದು ಕೌಟಿಲ್ಯನ ಅಭಿಪ್ರಾಯವಲ್ಲ. ದಂಡಧರನು ಸದಾ ಉದ್ಯತ (ಎತ್ತಿದ) ದಂಡನಾಗಿದ್ದರೆ, ಶಿಕ್ಷಿಸುವುದೇ ಅವನ ಸರ್ವಸ್ವವಾದರೆ ಪ್ರಜೆಗಳನ್ನು ರೇಗಿಸಿ ಮೇಲೆ ಹಾಕಿ

ಕೊಳ್ಳುವನು; ಅರಣ್ಯದಲ್ಲಿ ತಪಸ್ಸುಮಾಡುತ್ತಿರುವವನನ್ನು ಕೂಡ ಇವನು ರೇಗಿಸುವನು. ಆದರೆ ದಂಡವಿಹೀನನಾದರೂ ಅನರ್ಥವೇ; ಪ್ರಜೆಗಳು ಅವನನ್ನು ನಿರ್ಲಕ್ಷಿಸುವರು; ಸಮಾಜದಲ್ಲಿ ಮತ್ಸ್ಯನ್ಯಾಯ ತಲೆದೋರುವುದು: ಬಲಿಷ್ಠರು ಬಲಹೀನರನ್ನು ಹಿಂಸಿಸುವರು. ಯುಕ್ತವಾದ ಕಾಲದಲ್ಲಿ ವಿಹಿತವಾಗಿ ಬಲಪ್ರಯೋಗ ಮಾಡಿದರೆ ದುರ್ಬಲರೂ ಬಲಿಷ್ಠರನ್ನು ಎದುರಿಸುವಷ್ಟು ಶಕ್ತಿಪಡೆಯುವರು. ಆದುದರಿಂದ ಯುಕ್ತವಾದ ದಂಡ ಪ್ರಯೋಗವೇ ಸಾಧುವೆಂಬುದು ಕೌಟಿಲ್ಯನ ಮತ. ಪ್ರಭುಶಕ್ತಿಯನ್ನು ಯಾವ ರೀತಿಯಲ್ಲಿ ಉಪಯೋಗಿಸುವುದು ಯುಕ್ತವಾದುದು (ನಯ); ಯಾವ ರೀತಿಯಲ್ಲಿ ಪ್ರಯೋಗಿಸುವುದು ಅಯುಕ್ತ (ಅನಯ); ಯಾವ ರೀತಿಯಲ್ಲಿ ಆಡಳಿತ ನಡೆಸಿದರೆ ರಾಜ್ಯ ಬಲಪಡುವುದು; ಯಾವುದರಿಂದ ದೇಶವು ದುರ್ಬಲವಾಗುವುದು—ಈ ವಿಷಯಗಳನ್ನು ತರ್ಕಿಸಿ ಸಿದ್ಧಾಂತ ಮಾಡುವ ಶಾಸ್ತ್ರವೇ ದಂಡನೀತಿ.

---

## ೩. ರಾಷ್ಟ್ರದ ಸ್ವರೂಪ ಮತ್ತು ಕರ್ತವ್ಯಗಳು

ವಿಶ್ವವು ಹೇಗೆ ದೈವಸೃಷ್ಟಿಯೋ ಅದೇ ರೀತಿ ರಾಷ್ಟ್ರವೂ ದೈವನಿಯಾಮಕವಾಗಿ ಹುಟ್ಟಿದೆ. ರಾಷ್ಟ್ರನಿರ್ಮಾಣಕ್ಕೆ ಮೊದಲು ಜನರು ಮೃಗ ಪಶುಗಳಂತೆ ಕಾದಾಡುತ್ತ ಬಲಿಷ್ಠರು ಬಲಹೀನ

ರನ್ನು ನುಂಗುತ್ತಿದ್ದರು. ಈ ಅರಾಜಕ ಪರಿಸ್ಥಿತಿಯನ್ನು ಕೊನೆಗಾಣಿಸುವುದಕ್ಕಾಗಿ ಬ್ರಹ್ಮನು ಮನುವನ್ನು ಪ್ರಭುತ್ವಕ್ಕೆ ಆರಿಸಿ ಪ್ರಜಾವರ್ಗದ ಸಂರಕ್ಷಣೆಗಾಗಿ ಆತನನ್ನು ನೇಮಿಸಿದನೆಂದು ಐತಿಹ್ಯ. ಇದರಿಂದ ಪ್ರಭುವಾದವನ ಪ್ರಜಾಸಂರಕ್ಷಣಾ ಕಾರ್ಯವು ದೈವನಿಯಾಮಕವಾದುದು ಎಂದು ಶ್ರುತಪಡುವುದು. ರಾಜರಕ್ಷಣೆಯಿಲ್ಲದ ದೇಶ ರಾಜ್ಯವಲ್ಲ; ಅದರಲ್ಲಿ ಆಸ್ತಿಪಾಸ್ತಿಗಳಿಲ್ಲ, ಹೆಂಡಿರುಮಕ್ಕಳಿಲ್ಲ, ಎಲ್ಲೆಲ್ಲಿಯೂ ಸೂರೆ, ಧರ್ಮಗ್ಲಾನಿ, ದುಷ್ಟತನ; ಕೃಷಿ, ಕೈಗಾರಿಕೆ ಮತ್ತು ಪಶುಪಾಲನೆಗೆ ಅವಕಾಶವಿಲ್ಲ; ಜನರು ಭಯಗ್ರಸ್ತರಾಗಿ ಮತ್ಸ್ಯನ್ಯಾಯದಿಂದ ವಿಮೋಚನೆ ಇಲ್ಲದೆ ಅಧೋಗತಿಗೆ ಇಳಿಯುವರು. ರಾಜರಕ್ಷಣೆ ಇದ್ದರೆ ಶಾಂತಿ, ಜನಪದ ಸಂತೋಷ, ಸ್ತ್ರೀಯರಿಗೆ ಸಮಾಜದಲ್ಲಿ ಗೌರವ, ಯಜ್ಞಯಾಗಾದಿಗಳಿಗೆ ಸೌಲಭ್ಯ, ಕೃಷಿ ಕೈಗಾರಿಕೆಗಳಿಗೆ ಉತ್ತೇಜನ-ಇವೆಲ್ಲವೂ ದೊರೆಯುವುವು. ಪ್ರಜೆಗಳನ್ನು ಭಯಭೀತಿಗಳಿಂದ ತಪ್ಪಿಸಿ ಅವರ ಉತ್ತಮ ಜೀವನಕ್ಕೆ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಡುವ ಪ್ರಭುವಿಗೆ ಯಾಗಮಾಡಿದಷ್ಟು ಫಲ; ಪ್ರಜೆಗಳು ಗಳಿಸಿದ ಪುಣ್ಯದಲ್ಲಿಯೂ ಷಡ್ಭಾಗ. ಪ್ರಜಾರಕ್ಷಣೆಗೆ ಗಮನಕೊಡದೆ ಕಂದಾಯ ಮತ್ತು ತೆರಿಗೆಗಳನ್ನು ಮಾತ್ರ ಸುಲಿದುಕೊಳ್ಳುವ ಪ್ರಭುವು ಕಳ್ಳರಾಜ "ಪಾರ್ಥಿವ ತಸ್ಕರ" ನೆನ್ನಿಸಿಕೊಳ್ಳುತ್ತಾನೆ.

ರಾಜನು ರಾಷ್ಟ್ರವನ್ನುರಕ್ಷಿಸಿದ ಮಾತ್ರಕ್ಕೆ ಅವನ ಕರ್ತವ್ಯವು ಮುಗಿಯುವುದಿಲ್ಲ. ಅವನು ಪ್ರಜೆಗಳ ಸುಖವನ್ನು ಕಾಪಾಡಬೇಕು. ಪ್ರಜಾಸೌಖ್ಯವೇ ತನ್ನ ಸೌಖ್ಯ ಅವರ ಹಿತವೇ ತನ್ನ ಹಿತವೆಂದು ಅವನು ತಿಳಿದಿರಬೇಕು. ಈ ಘನ ಉದ್ದೇಶವನ್ನು ಕೌಟಿಲ್ಯನು ಈ ರೀತಿಯಲ್ಲಿ ಹೇಳಿದ್ದಾನೆ.

**" ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಂ ।**
**ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಂ ॥**
**I. 19.**

ಉದಾತ್ತವಾದ ಉದ್ದೇಶಗಳನ್ನು ಹೊಂದಿರುವುದಲ್ಲದೆ ನಡವಳಿಕೆಯಲ್ಲಿಯೂ ಪ್ರಭುವು ಪ್ರಜೆಗಳಿಗೆ ಮಾದರಿಯಾಗಿರಬೇಕು. ಪ್ರಜಾಕ್ಷೇಮ ಚಿಂತನೆಯಿಂದ ಸತ್ಕಾರ್ಯಗಳನ್ನು ಮಾಡಲು ಸಿದ್ಧನಾಗಿರಬೇಕು.

**" ರಾಜ್ಞೋ ಹಿ ವ್ರತಮುತ್ಥಾನಂ ಯಜ್ಞಃ ಕಾರ್ಯಾನುಶಾಸನಂ ।**
**ದಕ್ಷಿಣಾ ವೃತ್ತಿಸಾಮ್ಯಂ ಚ ದೀಕ್ಷಿತಸ್ಯಾಭಿಷೇಚನಂ ॥ I. 19.**

ರಾಜನು ಪ್ರಜಾಹಿತಕ್ಕಾಗಿ ಸಿದ್ಧನಾಗಿರುವುದೇ ಅವನು ಮಾಡುವ ವ್ರತ; ಕಾರ್ಯಾನುಶಾಸನವೇ ಅವನು ಮಾಡುವ ಯಾಗ; ಎಲ್ಲರ ವಿಷಯದಲ್ಲೂ ನಿಷ್ಪಕ್ಷಪಾತವಾದ ಮತ್ತು ಸಮಾನವಾದ ನೀತಿ ಅವನು ಕೊಡಬೇಕಾದ ದಕ್ಷಿಣೆ ಮತ್ತು ಮಾಡಬೇಕಾದ ದೀಕ್ಷಾಸ್ನಾನ.

ಧರ್ಮಪರಿಪಾಲನೆ ರಾಜನ ಇನ್ನೊಂದು ಮುಖ್ಯ ಕರ್ತವ್ಯ. ಧರ್ಮಾನುಗುಣವಾಗಿ ನಡೆಯುವುದೇ ಐಹಿಕ ಮತ್ತು ಪರಲೋಕ ಸುಖದ ತಳಹದಿ. ರಾಜನೇ ಧರ್ಮಭ್ರಷ್ಟನಾದರೆ ಸಮಾಜದ ಕಟ್ಟುಗಳು ಸಡಿಲವಾಗಿ ಮಾನವ ವರ್ಗವು ಒಬ್ಬರನ್ನೊಬ್ಬರು ನುಂಗುವ ಸ್ಥಿತಿಗೆ ಇಳಿಯುತ್ತದೆ. ಧರ್ಮಚ್ಯುತನಾದ ಪ್ರಭುವಿನಿಂದ ಎಂಥೆಂತಹ ಭಯಂಕರ ವಿಪತ್ತುಗಳು ಮಾನವ ವರ್ಗಕ್ಕೆ ಸಂಭವಿಸುತ್ತವೆಂಬುದನ್ನು ಸ್ಮೃತಿಗಳು ಚಿತ್ರಿಸಿವೆ. ಧರ್ಮ ಪರಿಪಾಲನೆಮಾಡುವ ಪ್ರಭುವನ್ನು " ರಾಜನ್ " ಎಂತಲೂ ಅಧರ್ಮಪ್ರವರ್ತಕನಾದ ಪ್ರಭುವನ್ನು " ವಿಶೃಲ "

ನೆಂತಲೂ ಸ್ಮೃತಿಗಳು ಕರೆಯುತ್ತವೆ. ಪ್ರಜಾಪರಿಪಾಲನೆಗಾಗಿಯೇ ರಾಜನು ನಿರ್ಮಾಣವಾಗಿರುವುದರಿಂದ ಅವನು ಧರ್ಮಕಾರ್ಯಗಳಲ್ಲಿಯೇ ತೊಡಗಿರಬೇಕು.

**ಧರ್ಮಾಯ ರಾಜಾ ಭವತಿ ನ ಕಾಮಕರಣಾಯ ತು ।**

ಅವನು ತನ್ನ ಪ್ರಜೆಗಳು ಸ್ವಧರ್ಮವನ್ನು ಬಿಡದಂತೆ ನೋಡಿಕೊಳ್ಳಬೇಕು:

**ಚತುರ್ವರ್ಣಾಶ್ರಮೋ ಲೋಕೋ ರಾಜ್ಞಾ ದಂಡೇನ ಪಾಲಿತಃ ।**
**ಸ್ವಧರ್ಮಕರ್ಮಾಭಿರತೋ ವರ್ತತೇ ಸ್ವೇಷು ವರ್ತ್ಮಸು ॥**

"ಧರ್ಮ" ಎಂಬ ಶಬ್ದಕ್ಕೆ ಹಿಂದೂ ಸಂಸ್ಕೃತಿಯಲ್ಲಿ ಒಂದು ವಿಶೇಷ ಅರ್ಥವಿದೆ. ಯಾವ ಉದ್ದೇಶಗಳು ಮತ್ತು ಸಾಧನೆಗಳು ಮಾನವವರ್ಗವನ್ನು ಉದ್ಧರಿಸುವುವೋ ಅವೇ ಧರ್ಮ. ಸಾಮಾಜಿಕ ರಾಜಕೀಯ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಸಂಬಂಧಿಸಿದ ವಿಷಯಗಳೆಲ್ಲವೂ ಮಾನವನ ಮೇಲ್ಮೆಗೆ ಸಹಕಾರಿಗಳಾದುದರಿಂದ ಅವುಗಳೂ ಧರ್ಮದಲ್ಲಿ ಸಮಾವೇಶವಾಗುವುವು. ಜೀವನದ ಮುಖ್ಯಗುರಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ—ಇವುಗಳ ಸಾಧನೆ. ಈ ಉದ್ದೇಶ ಸುಲಭ ಸಾಧನೆಗಾಗಿಯೇ ಜ್ಞಾನಾರ್ಜನೆ, ಸಂರಕ್ಷಣೆ, ವಾಣಿಜ್ಯ, ಮತ್ತು ಕೃಷಿ ಎಂಬ ನಾಲ್ಕು ವೃತ್ತಿಗಳನ್ನು ಆರ್ಯರು ರಚಿಸಿದರು.

ವೈದಿಕ ಧರ್ಮಕ್ಕನುಸಾರವಾಗಿ ಆಯಾ ಜಾತಿಯವರು ತಮ್ಮ ಧರ್ಮವನ್ನು ಕಾಪಾಡಿಕೊಳ್ಳಬೇಕಾದುದು ಅತ್ಯವಶ್ಯಕವೆಂಬುದನ್ನು ಕೌಟಿಲ್ಯನು ಒಪ್ಪಿರುತ್ತಾನೆ. ಧರ್ಮ ಮುಖ್ಯವಾಗಿ

ಎರಡು ವಿಧವಾಗಿದೆ: ವರ್ಣಾಶ್ರಮಧರ್ಮ ಮತ್ತು ಸಾಧಾರಣ ಧರ್ಮ ಎಂದು. ವರ್ಣಾಶ್ರಮ ಧರ್ಮದ ಪ್ರಕಾರ ಬ್ರಾಹ್ಮಣನಾದವನು ಮಾಡಬೇಕಾದುದು ಅಧ್ಯಯನ ಮತ್ತು ಅಧ್ಯಾಪನ, ಯಜನ ಮತ್ತು ಯಾಜನ, ದಾನಕೊಡುವುದು ಮತ್ತು ತೆಗೆದುಕೊಳ್ಳುವುದು. ಅಧ್ಯಯನ, ಯಜನ, ದಾನ, ಯೋಧವೃತ್ತಿ, ಭೂತರಕ್ಷಣೆ—ಇವು ಕ್ಷತ್ರಿಯರ ಧರ್ಮ. ವೈಶರು ಅಧ್ಯಯನ, ಯಜನ, ದಾನ, ಪಶುಪಾಲನ, ವ್ಯಾಪಾರಗಳನ್ನು ತಮ್ಮ ಧರ್ಮವಾಗಿ ಆಚರಿಸಬೇಕು. ಕೃಷಿಕರ್ಮ, ಪಶುಪಾಲನ, ವಾರ್ತಾ, ಮುಂತಾದುವು ಶೂದ್ರನ ಪಾಲಿಗೆ ಬಂದ ಕೆಲಸಗಳು. ಸತ್ಯ, ದಾನ, ಕ್ಷಮೆ, ಅಹಿಂಸೆ, ಇಂದ್ರಿಯ ಸಂಯಮ, ಗುರು ಶುಶ್ರೂಷೆ, ಲೋಭಶೂನ್ಯತ್ವ, ದೇವಬ್ರಾಹ್ಮಣಪೂಜೆ–ಇವು ಸಾಧಾರಣ ಧರ್ಮಗಳು. ರಾಷ್ಟ್ರದ ಏಳಿಗೆಗೆ ವಿರುದ್ಧವಾಗದ ರೀತಿಯಲ್ಲಿ ಈ ಸಮಸ್ತ ಧರ್ಮಗಳನ್ನೂ ಕಾಪಾಡಬೇಕಾದುದು ರಾಜನ ಕರ್ತವ್ಯ. ರಾಜನಾದವನು ಇದೇ ರೀತಿಯಲ್ಲಿ ದೇಶ ಪದ್ಧತಿಗಳಿಗೂ, ಕಾನೂನುಗಳಿಗೂ, ಗಣ ಮತ್ತು ಕೆಲಸಗಾರರ ಸಂಸ್ಥೆಗಳ ಧರ್ಮಕ್ಕೂ ಮನ್ನಣೆಯನ್ನು ಕೊಡಬೇಕು. ಪ್ರತಿ ವ್ಯಕ್ತಿಯೂ ತನ್ನ ವರ್ಣ, ಸಂಘ, ಸಂಸ್ಥೆಗಳ ನಿಬಂಧನೆಗಳಿಗೆ ಕುಂದುಬಾರದಂತೆ ಸಂಪೂರ್ಣ ಸ್ವಾತಂತ್ರ್ಯದಿಂದ ವರ್ತಿಸಬಹುದು. ಪ್ರತಿವ್ಯಕ್ತಿಗೂ ಅವನ ಜೀವನವನ್ನು ಸಾರ್ಥಕಗೊಳಿಸಲು ಅವಶ್ಯವಾದ ಸೌಕರ್ಯಗಳನ್ನು ಏರ್ಪಡಿಸುವುದು ರಾಷ್ಟ್ರದಕರ್ತವ್ಯ. ಹಾಗೆ ಒಂದು ರಾಷ್ಟ್ರದಲ್ಲಿ ಉತ್ತಮಜೀವನಕ್ಕೆ ಬೇಕಾಗುವ ಅನುಕೂಲಗಳು ಒದಗದಿದ್ದಲ್ಲಿ ಜನರು ಆ ರಾಷ್ಟ್ರವನ್ನು ತ್ಯಜಿಸಿ ಅನುಕೂಲಗಳಿರುವ ಬೇರೆ ರಾಷ್ಟ್ರಗಳಿಗೆ ಒಕ್ಕಲು ಹೋಗಬಹುದು.

ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿರುವ ನಿಯಮಗಳನ್ನು ಅಥವಾ ಹಿಂದಿನಿಂದಲೂ ಆಚರಣೆಯಲ್ಲಿರುವ ಕಟ್ಟುಕಾಯಿದೆಗಳನ್ನು ಪಾಲಿಸುವುದು ರಾಜನಿಗಾಗಿ ಮೀಸಲಾಗಿಟ್ಟ ಕೆಲಸ. ಇದನ್ನು ನಡೆಸುವ ಅಧಿಕಾರ ರಾಜನಿಗೆ ಪೂರ್ಣವಾಗಿ ಉಂಟು. ಆದರೆ ಶಾಸನಗಳನ್ನು ಮಾಡುವ ಅಧಿಕಾರವನ್ನು ಸಾಮಾನ್ಯವಾಗಿ ಹಿಂದೂ ನೀತಿಶಾಸ್ತ್ರಕಾರರು ರಾಜನಿಗೆ ಕೊಟ್ಟಿರುವುದಿಲ್ಲ. ಶ್ರೋತ್ರಿಯರು ರಚಿಸಿದ ಕಾನೂನಿನ ಪ್ರಕಾರ ತೀರ್ಪುಕೊಡುವ ಅಧಿಕಾರ ಮಾತ್ರ ರಾಜನಿಗೆ ಉಂಟು. ಕೌಟಿಲ್ಯನ ಪ್ರಕಾರ ರಾಜನಿಗೆ ಕಾನೂನುಗಳ ರಚನೆ, ಅದರಂತೆ ತೀರ್ಪುಕೊಡುವ ಅಧಿಕಾರ–ಎರಡೂ ಉಂಟು. ಆದರೆ ಕಾನೂನುಗಳನ್ನು ಮಾಡುವುದಕ್ಕೂ ಮತ್ತು ತೀರ್ಪುಕೊಡುವುದಕ್ಕೂ ಮುಂಚೆ ಶ್ರೇಷ್ಠ ಸಚಿವರ ಮತ್ತು ನೀತಿಶಾಸ್ತ್ರವಿಶಾರದರ ಸಲಹೆಗಳನ್ನು ಪಡೆಯಬೇಕು. ನ್ಯಾಯವಿರುದ್ಧವಾಗಿ ವರ್ತಿಸಿದ ರಾಜನನ್ನು ಜನರು ದೇಶಭ್ರಷ್ಟನನ್ನಾಗಿ ಮಾಡುವರೆಂಬ ಸಂಗತಿಯು ಸ್ಪಷ್ಟವಾಗಿದೆ. ನ್ಯಾಯನಿಷ್ಠನಾದ ಪ್ರಭುವಿಗೆ ಜನರು ಎದುರು ಬರಬಾರದು. ರಾಜನು ನ್ಯಾಯಬದ್ಧನಾಗಿರುವವರೆಗೂ ಅವನು ಪರಮ ಪ್ರಭುತ್ವವನ್ನು ಅನುಭವಿಸಬಹುದು. ವಿನಯವಿಚಕ್ಷಣೆಗಳಿಲ್ಲದ ಪ್ರಭುತ್ವ ಪರಮಪ್ರಭುತ್ವವಲ್ಲ; ಪಾರಮ್ಯವಿಲ್ಲದ ಪ್ರಭುತ್ವದಲ್ಲಿ ಸ್ವರಾಜ್ಯಸಿದ್ಧಿಯೂ ಇಲ್ಲ. ಆದುದರಿಂದ ಕೌಟಿಲ್ಯನ ಆದರ್ಶಪ್ರಭುತ್ವ ನ್ಯಾಯಪಾರಮ್ಯಗಳೆರಡರಿಂದ ಕೂಡಿದ ಪ್ರಭುತ್ವವೇ ಹೊರತು ಬರಿಯ ನಿರಂಕುಶಪ್ರಭುತ್ವವಲ್ಲ.

ಇಂತಹ ಪ್ರಭುತ್ವವನ್ನು ಸಾಧಿಸಬೇಕಾದರೆ ರಾಷ್ಟ್ರವು ಬಲವಾಗಿರಬೇಕು: ರಾಜನೂ ಶಕ್ತಿಯುತನಾಗಿರಬೇಕು: ಪರಕೀಯರ ಅಧೀನನಾಗಿರಕೂಡದು: ತನ್ನ ಪ್ರಜೆಗಳನ್ನು ಶಿಸ್ತಿನಲ್ಲಿ

ಇಡಲು ಬೇಕಾದ ದರ್ಪವನ್ನು ಹೊಂದಿರಬೇಕು. ಈರೀತಿ ನಿರ್ಮಾಣವಾದ ರಾಷ್ಟ್ರದಲ್ಲಿ ಅರ್ಥ ಧರ್ಮ ಎರಡೂ ಸಿದ್ಧಿಸು ವುವು.

---

## ೪. ರಾಜ್ಯಾಂಗಗಳು

ಪ್ರಭುತ್ವವು ರಾಜನೊಬ್ಬನಿಂದಲೇ ನಡೆಸುವುದು ಸಾಧ್ಯ ವಿಲ್ಲ. ಒಂದೇ ಚಕ್ರದಿಂದ ಬಂಡಿಯನ್ನು ಓಡಿಸುವುದು ಹೇಗೆ ಅಸಾಧ್ಯವೋ ಅದೇ ರೀತಿ ರಾಜನೊಬ್ಬನೇ ಸರ್ಕಾರದ ಕೆಲಸ ಗಳನ್ನು ನಡೆಸುವುದೂ ಅಸಾಧ್ಯ. ಆದುದರಿಂದ ರಾಜ್ಯಾಡಳಿತ ದಲ್ಲಿ ಏಳು ಅಂಗಗಳು ಏರ್ಪಟ್ಟಿವೆ. ರಾಜನೀತಿಜ್ಞರು ರಾಜ್ಯವನ್ನು ಶರೀರಕ್ಕೂ, ರಾಜ್ಯಾಂಗಗಳನ್ನು ಶರೀರದ ಅವಯವಗಳಿಗೂ ಹೋಲಿಸಿ ದ್ದಾರೆ. ಯಾವ ಒಂದು ಅವಯವ ಊನವಾದರೂ, ಅಥವಾ ಇಲ್ಲದಿದ್ದರೂ ಶರೀರವು ಹೇಗೆ ಸರಿಯಾಗಿ ಕೆಲಸಮಾಡದೆ ನಿಷ್ಪ್ರಯೋಜಕವಾಗುವುದೋ ಅದೇ ರೀತಿ ರಾಜ್ಯಾಂಗಗಳಲ್ಲಿ ಯಾವುದೊಂದಕ್ಕೆ ಕುಂದುಬಂದರೂ ರಾಜ್ಯಕ್ಕೆ ಕೇಡು ಸಿದ್ಧ. ಕೌಟಿಲ್ಯನು ರಾಷ್ಟ್ರಕ್ಕೆ ಏಳು ಅಂಗಗಳಿರಬೇಕೆಂದು ಹೇಳಿದ್ದಾನೆ. ಇವು ಸ್ವಾಮಿ, ಮಂತ್ರಿ, ಜನಪದ, ದುರ್ಗ, ಕೋಶ, ಸೈನ್ಯ ಮತ್ತು ಮಿತ್ರ. ಈ ಅಂಗಗಳೆಲ್ಲವೂ ರಾಷ್ಟ್ರದ ಏಳಿಗೆಗೆ ಮುಖ್ಯ ವಾದುವುಗಳಾದರೂ ಇವುಗಳನ್ನು ಸರಿಯಾಗಿ ನಡೆಯುವಂತೆ

ಮಾಡುವ ಮುಖ್ಯ ಅಂಗವಾದ ಸ್ವಾಮಿಗೆ ಕೌಟಿಲ್ಯನು ಪ್ರಧಾನ ಸ್ಥಾನವನ್ನಿತ್ತಿದ್ದಾನೆ. ರಾಜನು ಸಪ್ತಾಂಗಗಳ ಮೇಲ್ವಿಚಾರಣೆಯನ್ನು ಎಂದರೆ ರಾಷ್ಟ್ರದ ಐಕ್ಯತೆಯನ್ನು ಸಾಧಿಸಬೇಕು. ಮಂತ್ರಿಪರಿಷತ್ತು ರಾಜ್ಯಭಾರಕ್ರಮವನ್ನೂ ಕೋಶವು ಐಶ್ವರ್ಯವನ್ನೂ ಸೈನ್ಯವು ರಾಷ್ಟ್ರಬಲವನ್ನೂ ದುರ್ಗ ಮತ್ತು ಮಿತ್ರರು ರಾಷ್ಟ್ರಸಂರಕ್ಷಣೆಯನ್ನೂ ಸಾಧಿಸಬೇಕು. ಕೌಟಿಲ್ಯನು ಪ್ರತಿಪಾದಿಸಿರುವ ರಾಜ್ಯತತ್ವಗಳಿಗೆ ಅನುಸಾರವಾಗಿ ಸ್ಥಾಪಿಸಿದ ರಾಜ್ಯವನ್ನು ಅದೇ ಕಾಲದ ಗ್ರೀಕರ ರಾಷ್ಟ್ರತತ್ವಗಳೊಡನೆಯೂ ರಾಷ್ಟ್ರಗಳೊಡನೆಯೂ ಪರ್ಷಿಯಾ ದೇಶದಲ್ಲಿ ಡೇರಿಯಸ್ಸನು ಏರ್ಪಡಿಸಿದ್ದ ರಾಜ್ಯಭಾರಕ್ರಮದೊಡನೆಯೂ ತೂಗಿನೋಡಿದರೆ ಅಂದಿನ ಭಾರತದ ರಾಜಕೀಯ ಆಡಳಿತ ವ್ಯವಸ್ಥೆಯು ಅತಿ ಉನ್ನತದ ಮಟ್ಟವನ್ನೇರಿದ್ದಿತೆಂದು ತಿಳಿಯುತ್ತದೆ.

**ಸ್ವಾಮಿ**– ಕೌಟಿಲ್ಯನ ಕಾಲದಲ್ಲಿದ್ದ ಉತ್ತರ ಹಿಂದೂಸ್ಥಾನದ ರಾಜಕೀಯ ಪರಿಸ್ಥಿತಿಯನ್ನು ಪರಿಶೀಲಿಸಿದರೆ ಕೌಟಿಲ್ಯನು ರಾಜನಿಗೆ ಏತಕ್ಕೆ ಪ್ರಧಾನಸ್ಥಾನವನ್ನಿತ್ತನೆಂಬುದು ವ್ಯಕ್ತವಾಗುತ್ತದೆ. ನಾನಾ ತರಹದ ಪ್ರಭುತ್ವವುಳ್ಳ ರಾಜ್ಯಗಳು ಆಳಿದು ದೇಶವು ಛಿನ್ನಭಿನ್ನವಾಗಿದ್ದಿತು. ರಾಜಪ್ರಭುತ್ವವಿದ್ದ ರಾಷ್ಟ್ರಗಳಲ್ಲಿ ರಾಜನ ಮಕ್ಕಳಲ್ಲೇ ಅಂತಃಕಲಹ ಹುಟ್ಟಿ ರಾಜ್ಯಗಳು ಕ್ಷೀಣವಾಗುತ್ತಲಿದ್ದವು. ಒಟ್ಟಿನಲ್ಲಿ ಯಾವ ರಾಜ್ಯವೂ ಪರಕೀಯರ ಧಾಳಿಯನ್ನು ಎದುರಿಸುವಷ್ಟು ಶಕ್ತಿಯುತವಾಗಿರಲಿಲ್ಲ. ಅಂದಿನ ಪರಿಸ್ಥಿತಿಯಲ್ಲಿ ರಾಜ್ಯವು ಸದ್ಯದಲ್ಲಿಯೇ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದೆಂಬ ಭಯವು ಜನರಲ್ಲಿ ಮೂಡಿದ್ದಿತು. ಹದಗೆಟ್ಟಿದ್ದ ಪರಿಸ್ಥಿತಿಯನ್ನು ತಹಬಂದಿಗೆ ತರುವುದು ಹೇಗೆಂಬುದೇ ಅಂದಿನ ರಾಜಶಾಸ್ತ್ರಜ್ಞರ ಮುಖ್ಯ ಸಮಸ್ಯೆ

ಯಾಗಿದ್ದಿತು. ಜನಗಳೂ ಮೇಲೆ ಹೇಳಿದ ಕೆಲಸವನ್ನು ಮಾಡ ಬಲ್ಲ ದಕ್ಷನಾದೊಬ್ಬನಾಯಕನಿಗೆ ತಲೆಬಾಗಿ ನಡೆಯಲು ಸಿದ್ಧ ರಾಗಿದ್ದರು. ಕೌಟಿಲ್ಯನು ರಾಷ್ಟ್ರವೆಂದರೆ ನಿರ್ದಿಷ್ಟ ಎಲ್ಲೆಗಳಿಂದ ಪ್ರತ್ಯೇಕಿಸಲ್ಪಟ್ಟ ಪ್ರಕೃತಿಯಿಂದ ಕೂಡಿದ ಒಂದು ಪ್ರದೇಶ ವೆಂದೂ, ಅದರಲ್ಲಿ ಸಪ್ತಾಂಗಗಳಿಂದ ಕೂಡಿದ ಸರ್ಕಾರವಿರ ಬೇಕೆಂದೂ ಹೇಳಿದ್ದಾನೆ. ಸಪ್ತಾಂಗಗಳು ಸರಿಯಾಗಿ ಕೆಲಸ ಮಾಡಬೇಕಾದರೆ ಅವುಗಳಲ್ಲಿ ಮುಖ್ಯನಾದ ರಾಜನು ಬಹು ದಕ್ಷನಾಗಿರಬೇಕು ಯುಕ್ತಾಯುಕ್ತವಾದುದನ್ನೂ ಬಲಾಬಲ ಗಳನ್ನೂ ಅರಿತು, ವಿನಯದಿಂದ ನಡೆಯುವವನಾಗಿರಬೇಕು. ರಾಜ್ಯದ ಒಗ್ಗಟ್ಟು ರಾಜನ ಮೂಲಕ ಸಾಧ್ಯವಾಗುವಮಟ್ಟಿಗೆ ಇತರ ಅಂಗಗಳಿಂದ ಆಗಲಾರದು. ಅವನು ದೇಶದಲ್ಲಿ ಐಕಮತ್ಯ ವನ್ನು ಹುಟ್ಟಿಸುವವನು. ಪ್ರಜಾಕ್ಷೇಮ, ಆರ್ಥಿಕೋನ್ನತಿ, ನೈತಿಕ ಜೀವನ ಮೇಲ್ಮೆ-ಇವೆಲ್ಲವೂ ಅವನಿಂದ ಮಾತ್ರ ಸಾಧ್ಯ. ಅವನೇ ತನ್ನ ನಡತೆಯಲ್ಲಿ ಎಲ್ಲಕ್ಕೂ ಆದರ್ಶಪ್ರಾಯನು. ಇದ ರಂತೆಯೇ ಕಲೆ, ಧರ್ಮ, ನ್ಯಾಯ ಇವುಗಳಲ್ಲಿ ಯಾವುದು ಉತ್ತ ಮಗೊಳ್ಳಬೇಕಾದರೂ ರಾಜನ ಅಭಯಹಸ್ತವಿರಲೇಬೇಕು.

ರಾಷ್ಟ್ರಕ್ಕೂ ಮತ್ತು ಅದರ ಪ್ರಕೃತಿಗಳಿಗೂ ರಾಜನೇ ಒಡೆಯನು ; ಅವನೇ ಸರ್ಕಾರ.* ಪುರೋಹಿತ ಅಮಾ ತ್ಯರೇ ಮೊದಲಾಗಿ ಎಲ್ಲ ಅಧಿಕಾರಿಗಳನ್ನು ನೇಮಿಸುವ ಹಕ್ಕೂ ಅವನಿಗಿದೆ. ರಾಜ್ಯಾರ್ಜನೆ, ರಾಜ್ಯರಕ್ಷಣೆ, ರಾಜ್ಯವಿಸ್ತರಣೆ ಮತ್ತು ಇದರ ಅನುಭವ, ಇವು ನಾಲ್ಕು ರಾಜನ ಮುಖ್ಯ ಉದ್ದೇ ಶಗಳು. ರಾಜ್ಯಾರ್ಜನೆಗೆ ಬೇಕಾದ ಅನುಕೂಲಗಳನ್ನು ಪಡೆಯ

---

*"ತತ್ಕೂಟಸ್ಥಾನೀಯೋ ಹಿ ಸ್ವಾಮೀ" ಮತ್ತು "ರಾಜಾ ರಾಜ್ಯಮಿತಿ ಪ್ರಕೃತಿಸಂಕ್ಷೇಪಃ" VIII, 1.

ಬೇಕು. ಈ ಕೆಲಸದಲ್ಲಿ ನ್ಯಾಯಾನ್ಯಾಯಗಳ ಪರಿಶೀಲನೆ ಅಗತ್ಯ ವಿದೆ. ರಾಜ್ಯಪಾಲನೆಯಲ್ಲಿ ತಾನೇ ಸ್ವಂತವಾಗಿ ನಡೆಸಲಾಗದ ಕೆಲಸಗಳನ್ನು ಮಂತ್ರಿಮಂಡಲಕ್ಕೆ ವಹಿಸಬೇಕು. ಯೋಗ್ಯರಾದವರನ್ನು ತನ್ನ ಮಿತ್ರವೃಂದದಲ್ಲಿ ಸೇರಿಸಿಕೊಳ್ಳಬೇಕು. ದುಷ್ಟರನ್ನೂ ರಾಜದ್ರೋಹಿಗಳನ್ನೂ ಮತ್ತು ಶತ್ರುಗಳನ್ನೂ ಎಂತಹ ಕುಟಿಲ ಉಪಾಯಗಳಿಂದಲಾದರೂ ನಾಶಪಡಿಸಬಹುದು.* ಪ್ರಜೆಗಳನ್ನು ದಾರಿದ್ರ್ಯ, ಬೆಂಕಿ, ಕ್ಷಾಮವೇ ಮೊದಲಾದ ಉಪಸನಿಪಾತಗಳ ಹಾವಳಿಯಿಂದ ರಕ್ಷಿಸಬೇಕು. ಇವುಗಳಿಗೆ ರಾಜನು ಗಮನಕೊಡದ ಪಕ್ಷದಲ್ಲಿ ಪ್ರಜೆಗಳಲ್ಲಿ ಅತೃಪ್ತಿಮೂಡಿ ರಾಷ್ಟ್ರಕ್ಕೆ ವಿಪತ್ತು ಸಂಭವಿಸುತ್ತದೆ.

ರಾಜ್ಯದ ಮುಖ್ಯ ಧ್ಯೇಯಗಳನ್ನು ಸಾಧಿಸುವುದೂ ಆಡಳಿತದ ಕಠಿನ ಸಮಸ್ಯೆಗಳನ್ನು ಪರಿಹರಿಸುವುದೂ ರಾಜ್ಯವನ್ನು ದಕ್ಷತೆಯಿಂದ ಕಾಪಾಡುವುದೂ ಸುಶಿಕ್ಷಿತನಾದ ರಾಜನಿಗೆ ಮಾತ್ರ ಸಾಧ್ಯ. ಆದುದರಿಂದ ದೇಶದ ಉನ್ನತಿಗೆ ಮೂಲಕಾರಣನಾದ ರಾಜನ ಪಾತ್ರಕ್ಕೆ ಕೌಟಿಲ್ಯನು ತನ್ನ ಗ್ರಂಥದಲ್ಲಿ ಹೆಚ್ಚು ಗಮನ ಕೊಡುವುದು ನ್ಯಾಯವಾಗಿಯೇ ಇದೆ. ರಾಜನಿಗೆ ಏನು ಗುಣಗಳಿರಬೇಕು, ಅವನ ವಿದ್ಯಾಭ್ಯಾಸಂಗವು ಯಾವರೀತಿ ನಡೆಯಬೇಕು, ಅವನು ಯಾರ ಮಂತ್ರಾಲೋಚನೆಯನ್ನು ಪಡೆಯಬೇಕು, ಅವನ ನಡತೆ ಹೇಗಿರಬೇಕು, ಅವನು ಜನರ ಶಿಕ್ಷೆ ರಕ್ಷಣೆಯಲ್ಲೂ ನ್ಯಾಯವ್ಯವಸ್ಥೆಯಲ್ಲೂ ಆಚರಿಸಬೇಕಾದ ನೀತಿ ಯಾವುದು, ಪರರಾಜರೊಂದಿಗೆ ಹೇಗೆ ಸಂಧಿವಿಗ್ರಹಗಳನ್ನು ನಡೆಸಬೇಕು, ತಾನು ಗೆದ್ದ ದೇಶದ ಪ್ರಜೆಗಳನ್ನು ಹೇಗೆ ಒಲಿಸಿಕೊಳ್ಳಬೇಕು, ಇವೇ ಮೊದಲಾದ ಅಂಶಗಳನ್ನು ಕೌಟಿಲ್ಯನು

---

* ಏವಂ ದುಷ್ಟೇಷ್ವಧಾರ್ಮಿಕೇಷು ಚ ವರ್ತೇತ ನೇತರೇಷು ॥ V. 2.

ಅರ್ಥಶಾಸ್ತ್ರದ ಬೇರೆ ಬೇರೆ ಅಧಿಕರಣಗಳಲ್ಲಿ ವಿವರಿಸಿದ್ದಾನೆ.

ಕೌಟಿಲ್ಯನ ರಾಷ್ಟ್ರದಲ್ಲಿ ರಾಜನಿಗೆ ಅಪರಿಮಿತವಾದ ಅಧಿಕಾರ ಇದೆ. ರಾಜ್ಯದ ವ್ಯವಸ್ಥೆಯು ಚೆನ್ನಾಗಿರಬೇಕಾದರೆ ಅದು ಉನ್ನತಿಪಡೆದು ಪ್ರಬಲವಾಗಿರಬೇಕಾದರೆ ರಾಜನಿಗೆ ಅಷ್ಟು ಅಧಿಕಾರವಿರಲೇಬೇಕು. ಅಧಿಕಾರ ವಿಚಕ್ಷಣೆಯಿಂದ ನಡೆಯ ಬೇಕಾದರೆ ಅದನ್ನು ನಡೆಸುವ ವಿವೇಚನೆಯೂ ರಾಜನಿಗೆ ವಿಶೇಷವಾಗಿರಲೇಬೇಕು. ರಾಜನ ಶಕ್ತಿಗೆ ತಕ್ಕಂತೆ ವಿನಯವಿರ ಬೇಕು. ವಿದ್ಯೆಯೇ ವಿನಯಕ್ಕೆ ಮೂಲಾಧಾರ. ಆದುದರಿಂದ ರಾಜನ ವಿದ್ಯಾಭ್ಯಾಸವು ಅತಿ ದಕ್ಷರಾದ ಉಪಾಧ್ಯಾಯರಿಂದ ನಡೆಯಬೇಕು. ಆನ್ವೀಕ್ಷಕೀ ತ್ರಯೀ ವಾರ್ತಾ ಮತ್ತು ದಂಡನೀತಿ, ಇವುಗಳಲ್ಲಿ ಪಾರಂಗತನಾಗಿರಬೇಕು. ರಾಜನ ವಿದ್ಯೆಯನ್ನು ಕುರಿತು ಕೌಟಿಲ್ಯನು ಪ್ರತ್ಯೇಕವಾಗಿ ಒಂದು ಅಧ್ಯಾಯವನ್ನು ಬರೆದಿದ್ದಾನೆ.

ಇನ್ನೊಂದು ಅಧ್ಯಾಯದಲ್ಲಿ ರಾಜನು ಹೇಗಿರಬೇಕೆಂಬು ದನ್ನು ವಿವರಿಸಿದ್ದಾನೆ. ರಾಜನು ಅರಿಷಡ್ವರ್ಗಗಳನ್ನು ಗೆದ್ದು ಜಿತೇಂದ್ರಿಯನಾಗಿರಬೇಕೆಂಬುದನ್ನು ಒತ್ತಿ ಹೇಳುತ್ತಾನೆ.† ಇನ್ನೊಂದು ಕಡೆ ರಾಜನು ತಾನು ಜಯಿಸಿದ ರಾಜನ ರಾಣಿ ವಾಸದಲ್ಲಿ ಮತ್ತು ಪ್ರಜೆಗಳಲ್ಲಿ ಸಂಭಾವಿತನಂತೆ ನಡೆದುಕೊಳ್ಳ ಬೇಕು. ಆದರೆ ಮೋಸಗಾರರಾದ ಶತ್ರುಗಳ ವಿಷಯದಲ್ಲೂ, ರಾಷ್ಟ್ರದ್ರೋಹಿಗಳ ವಿಷಯದಲ್ಲೂ ಪಟಿಂಗರ ವಿಷಯದಲ್ಲೂ ಸಾಧುವಿನಂತೆ ವರ್ತಿಸುವುದು ಸರಿಯಾದ ರಾಜನೀತಿಯಲ್ಲ ವೆಂದೂ ತಿಳಿಸಿದ್ದಾನೆ. ರಾಜನು ಸಾಧುಗಳಲ್ಲಿ ಸಾಧು, ಕಪಟಿಗ ಳಲ್ಲಿ ಕಪಟಿ, ಮೋಸಗಾರರಲ್ಲಿ ಮೋಸಗಾರ. ಪ್ರಭುಭಕ್ತರೂ

---

†ರಾಜ್ಯಮೂಲಮಿಂದ್ರಿಯಜಯಃ. I. 3.

ಸ್ವಧರ್ಮಪರಾಯಣರೂ ವಿದ್ಯಾವಿನಯಸಂಪನ್ನರೂ ದೂರ ದರ್ಶಿಗಳೂ ಆದವರ ಸಹವಾಸದಲ್ಲಿದ್ದು ಕಠಿನ ಪ್ರಸಂಗಗಳಲ್ಲಿ ಅವರ ಬುದ್ಧಿವಾದವನ್ನು ಕೇಳುವುದು ಧರ್ಮಬದ್ಧವಾದುದು.

ರಾಜನಿಗಾಗಿ ದಿನವನ್ನು ಎಂಟು ನಾಳಿಕೆಗಳಾಗಿ ವಿಭಾಗ ಮಾಡಿದೆ. ಪ್ರತಿ ನಾಳಿಕೆಯಲ್ಲೂ ಪ್ರತ್ಯೇಕವಾಗಿ ಗೊತ್ತುಮಾಡಿರುವ ಕೆಲಸವನ್ನು ಬಿಡದೆ ಮಾಡಬೇಕು. ಮೊದಲನೆಯದರಲ್ಲಿ ಆಯುವ್ಯಯ ವಿಚಾರಗಳನ್ನು ಪರಿಶೀಲಿಸುವುದು. ಪ್ರಜೆಗಳ ಕಷ್ಟಸುಖಗಳ ವಿಚಾರಣೆ ಎರಡನೆಯದರಲ್ಲಿ. ವೇದ, ತತ್ವ ಶಾಸ್ತ್ರ ಮತ್ತು ಇತರ ಗ್ರಂಥಗಳನ್ನು ಮೂರನೇ ನಾಳಿಕೆಯಲ್ಲಿ ಅಭ್ಯಾಸಮಾಡಬೇಕು. ನಾಲ್ಕನೆ ನಾಳಿಕೆಯಲ್ಲಿ ಹಿರಣ್ಯವನ್ನು ಸ್ವೀಕರಿಸಿ ಮುಖ್ಯಾಧಿಕಾರಿಗಳನ್ನು ನೋಡುವುದು. ಐದನೆಯದರಲ್ಲಿ ಅಮಾತ್ಯರೊಡನೆ ಮಂತ್ರಾಲೋಚನೆ ಮತ್ತು ಗೂಢ ಚಾರರೊಡನೆ ಗುಪ್ತ ವಿಷಯಗಳ ಪರಿಶೀಲನೆ. ಆರನೆಯದರಲ್ಲಿ ವಿಶ್ರಾಂತಿ. ಏಳು ಮತ್ತು ಎಂಟನೇ ನಾಳಿಕೆಗಳಲ್ಲಿ ಚತುರಂಗಬಲ ಪರೀಕ್ಷೆ ಮತ್ತು ಸೇನಾಪತಿಗಳೊಡನೆ ಗೂಢಾಲೋಚನೆ. ರಾತ್ರಿಯಲ್ಲಿ ರಾಜನು ನಾಲ್ಕು ಮತ್ತು ಐದನೆ ಘಳಿಗೆಗಳಲ್ಲಿ ವಿಶ್ರಾಂತಿಯನ್ನು ತೆಗೆದುಕೊಂಡು ಮಿಕ್ಕ ಘಳಿಗೆಗಳಲ್ಲಿ ಪ್ರಭುತ್ವದ ಕಾರ್ಯಗಳನ್ನು ನಡೆಸಬೇಕು. ಅಹೋರಾತ್ರಿ ಸಭಾಗೃಹದಲ್ಲಿ ಯಾರಾದರೂ ಅರ್ಜಿದಾರರಿದ್ದರೆ ಅವರನ್ನು ಕರೆಯಿಸಿ ಅವರ ಮನವಿಗಳನ್ನು ಸ್ವಂತವಾಗಿ ವಿಚಾರಿಸಬೇಕು. ಇದನ್ನೆಲ್ಲವನ್ನೂ ನೋಡಿದರೆ ರಾಜನ ಜೀವನದಷ್ಟು ಕಠಿನ ಮತ್ತು ಸಂಕೀರ್ಣವಾದ ಜೀವನವು ಬೇರೆ ಯಾರದೂ ಆಗಿರಲಿಲ್ಲ ವೆಂದು ತೋರುತ್ತದೆ.

**ಮಂತ್ರಿಪರಿಷತ್ತು**—ಸಪ್ತಾಂಗಗಳಲ್ಲಿ ಪ್ರಭುವನ್ನು ಬಿಟ್ಟರೆ

ಮಂತ್ರಿಯೇ ಮುಖ್ಯ. ರಾಜನು ಮುಖ್ಯವಾಗಿ ಪ್ರಭುಶಕ್ತಿ ಮಂತ್ರಶಕ್ತಿ ಮತ್ತು ಉತ್ಸಾಹ ಶಕ್ತಿಗಳನ್ನು ಹೊಂದಿರಬೇಕು. ಉತ್ಸಾಹಕ್ಕಿಂತಲೂ ಸೈನ್ಯಕೋಶಗಳನ್ನೊಳಗೊಂಡ ಪ್ರಭುಶಕ್ತಿ ಮೇಲು; ಮಂತ್ರಶಕ್ತಿಯಿಂದ ಕೂಡಿದ ಪ್ರಭುಶಕ್ತಿ ಇನ್ನೂ ಮೇಲು. ಕಾನೂನು ರಚನೆ, ಶಾಸನಗಳ ಪರಿಪಾಲನೆ, ನ್ಯಾಯ ವ್ಯವಸ್ಥೆ ಮತ್ತು ಜನಗಳ ಸುಖಜೀವನ ಇವೆಲ್ಲವೂ ಮಂತ್ರ ಶಕ್ತಿಬಲದಿಂದಲೇ ಸಾಧ್ಯ. ಮಂತ್ರಿಗಳ ಸಲಹೆಗಳಿಂದ ಉತ್ತಮ ವಾಗಿ ನಿಯಂತ್ರಿತವಾದ ನೃಪತ್ವವೇ ನೃಪತ್ವ.

**ಸಹಾಯಸಾಧ್ಯಂ ರಾಜತ್ವಂ ಚಕ್ರಮೇಕಂ ನ ವರ್ತತೇ ।**
**ಕುರ್ವೀತ ಸಚಿವಾಂಸ್ತಸ್ಮಾತ್ತೇಷಾಂ ಚ ಶೃಣುಯಾನ್ಮತಂ ॥**

1-3-14.4

ಉತ್ಕೃಷ್ಟವಾದ ಮಂತ್ರಿಸಹಾಯವಿಲ್ಲದಿದ್ದರೆ ರಾಜನು ಎಷ್ಟೇ ಬಲವಾದ ಸೈನ್ಯಕೋಶಗಳಿಂದ ಕೂಡಿದ್ದರೂ ವ್ಯರ್ಥ. ಮಂತ್ರಿ ಗಳು ರಾಜನ ಕಣ್ಣುಗಳು. ಯಾವ ಕಾರ್ಯಾರಂಭಕ್ಕೂ ಮಂತ್ರಾ ಲೋಚನೆ ಪೂರ್ವಭಾವಿಯಾಗಿ ನಡೆದಿರಬೇಕು: "ಮಂತ್ರ ಪೂರ್ವಸ್ಸರ್ವಾರಂಭಃ" "ಅಮಾತ್ಯಮೂಲಾಸ್ಸರ್ವಾರಂಭಾಃ"

ಮಂತ್ರಿಮಂಡಲಕ್ಕೆ ಅರ್ಥಶಾಸ್ತ್ರದಲ್ಲಿ ಪರಿಷತ್ತೆಂದು ಹೆಸರಿದೆ. ಪರಿಷತ್ತಿನಲ್ಲಿ ಎರಡು ಭಾಗ: ಪ್ರಧಾನಮಂತ್ರಿ, ಪುರೋಹಿತ,* ಸೇನಾಪತಿ, ಮತ್ತು ಯುವರಾಜ ಇವರುಗಳಿಂದ ಕೂಡಿದ ಒಳ ಮಂಡಳ. ದೌವಾರಿಕ, ಅಂತರ್ವಂಶಿಕ, ಪ್ರಶಾಸ್ತಾ, ಸಮಾ

---

*ವೇದಗಳ ಕಾಲದಲ್ಲಿ ಪುರೋಹಿತನಿಗೆ ರಾಜಕೀಯದಲ್ಲಿ ಮುಖ್ಯ ಪಾತ್ರವಿತ್ತು. ಕೌಟಲ್ಯನ ಅರ್ಥಶಾಸ್ತ್ರದ ಸಪ್ತಾಂಗಗಳಲ್ಲಿ ಅವನನ್ನು ಸೇರಿಸಿಲ್ಲ.

ಹರ್ತಾ, ಸನ್ನಿಧಾತಾ, ಪ್ರದೇಷ್ಟಾ ಮತ್ತು ಇತರ ಅಮಾತ್ಯ ರಿಂದ ಕೂಡಿದ ಹೊರಮಂಡಲ. ಮಂತ್ರಿಯಾದವನು ದೃಢ ಚಿತ್ತ, ಶೀಲವಂತ, ಸಂಪ್ರಿಯ, ಪ್ರಾಜ್ಞ, ದಕ್ಷ, ಮತ್ತು ವಾಗ್ಮಿ ಯಾಗಿರಬೇಕು. ಸಾಮಾನ್ಯವಾಗಿ ಮಂತ್ರಾಲೋಚನೆಯು ಒಳ ಮಂಡಲಕ್ಕೂ, ಆಲೋಚನೆಯನ್ನು ಕಾರ್ಯರೂಪದಲ್ಲಿ ತರುವ ಕೆಲಸವು ಹೊರಮಂಡಲಕ್ಕೂ ಸೇರಿದ್ದಿತು. ಮಂತ್ರಿಪರಿಷತ್ತಿನಲ್ಲಿ ಅಧ್ಯಕ್ಷ ಮತ್ತು ಅಮಾತ್ಯರೇ ಅಲ್ಲದೆ ಪೌರ ಮತ್ತು ಜನಪದ ಸಂಸ್ಥೆಗಳ ಮುಖಂಡರೂ ಇರುತ್ತಿದ್ದರು. ಈ ತೀರ್ಥರಿಗೆಲ್ಲಾ ಮಹಾಮಾತ್ಯರೆಂಬ ಹೆಸರನ್ನು ಅರ್ಥಶಾಸ್ತ್ರದಲ್ಲಿ ಕೊಟ್ಟಿದೆ. ಬೃಹಸ್ಪತಿ, ಶುಕ್ರ ಮೊದಲಾದ ಸ್ಮೃತಿಕಾರರು ಮಂತ್ರಿಪರಿಷತ್ತಿ ನಲ್ಲಿ ಎಂಟರಿಂದ ಇಪ್ಪತ್ತಮೂರುಮಂದಿ ಸದಸ್ಯರಿರಬಹುದೆಂದು ಹೇಳಿದ್ದಾರೆ. ಕೌಟಿಲ್ಯನು ಒಳಮಂಡಲದಲ್ಲಿ ಮೂರು ಅಥವಾ ನಾಲ್ಕು ಸದಸ್ಯರು, ಹೊರಮಂಡಲದಲ್ಲಿ ರಾಷ್ಟ್ರಾನುಕೂಲತೆಗೆ ತಕ್ಕಹಾಗೆ " ಯಥಾಸಾಮರ್ಥ್ಯಂ " ಸದಸ್ಯರು ಇರಬಹುದೆಂದು ಹೇಳುತ್ತಾನೆ.

ಸಂಧಿ ವಿಗ್ರಹಾದಿ ಸಕಲ ಕಾರ್ಯಗಳನ್ನೂ ರಾಜನು ಒಳಮಂಡಲದ ಸಲಹೆ ಪಡೆದು ಸಮಂಜಸವಾಗಿಯೂ ಲೋಕಹಿತಕರವಾಗಿಯೂ ಇರುವಂತೆ ಮಾಡಬೇಕಾಗಿದ್ದಿತು. ಯಾವ ಕೆಲಸವನ್ನು ಪ್ರಾರಂಭಿಸುವುದಕ್ಕೂ ಮುಂಚೆ ಸಾಧನ ನಿರ್ಣಯ, ಕಾರ್ಯ ಕೈಗೂಡಲು ಬೇಕಾಗುವ ಜನಸಾಮಗ್ರಿಗಳ ಸಂಗ್ರಹ, ಕಾಲನಿರ್ಣಯ, ಕಾರ್ಯಸಾಧನೆಗೆ ಅಡ್ಡಿಬರುವ ದೈವಿಕ ಮತ್ತು ಮಾನುಷಿಕ ವಿಪತ್ತುಗಳು, ಕಾರ್ಯಸಾಧನೆ ಯಿಂದ ಉಂಟಾಗುವ ಪರಿಣಾಮ—ಇವುಗಳನ್ನು ನಿಶ್ಚಯಿಸಿ ರಾಜನಿಗೆ ಸಲಹೆಕೊಡುವುದು ಒಳಮಂಡಲದ ಮುಖ್ಯ ಕೆಲಸ.

ಮಂತ್ರಿಪರಿಷತ್ತಿನಲ್ಲಿ ಬಹುಮತ ಬೆಂಬಲವಿಲ್ಲದ ನಿರ್ಣಯ ಗಳನ್ನು ರಾಜನು ಆಚರಣೆಗೆ ತರಕೂಡದೆಂಬ ಸಂಪ್ರದಾಯ ಬದ್ಧ ತತ್ವಕ್ಕೆ ಕೌಟಿಲ್ಯನು ವಿಶೇಷ ಮನ್ನಣೆಯನ್ನು ಕೊಟ್ಟಿದ್ದಾನೆ. ರಾಜನ ಎಲ್ಲ ಕಾರ್ಯಗಳಿಗೂ ಅಮಾತ್ಯಸಂಪತ್ತಿನ ಸಮ್ಮತಿ ಮುದ್ರೆ ಅವಶ್ಯಕವಾಗಿದ್ದಿತು. ಎಂದರೆ ರಾಜನ ಆಜ್ಞೆಗಳು ಶಾಸನ ಬದ್ಧವಾಗಿದ್ದುವು. ಮಂತ್ರಿಪರಿಷತ್ತು ಲಿಖಿತರೂಪದಲ್ಲಿಲ್ಲದ ರಾಜಾಜ್ಞೆಗಳನ್ನು ಆದರಿಸುತ್ತಿರಲಿಲ್ಲ. ಶ್ರುತಿಗೂ ಸ್ಮೃತಿಗೂ ವಿರೋಧ ಬಂದರೆ ಶಿಷ್ಟಾಚಾರವನ್ನೇ ಪ್ರಮಾಣವಾಗಿ ತೆಗೆದು ಕೊಳ್ಳಬಹುದೆಂದು ಧರ್ಮಶಾಸ್ತ್ರವು ತಿಳಿಸಿದೆ. ಕೌಟಿಲ್ಯನು ಪ್ರಾಚೀನಕಾಲದಿಂದಲೂ ರೂಢಿಯಲ್ಲಿ ಬಂದ ನೈತಿಕ ಮತ್ತು ಧಾರ್ಮಿಕ ನಿಯಮಗಳನ್ನಲ್ಲದೆ ಸಮಾಜ ಬೆಳೆದಂತೆ ದೇಶ ಕಾಲ ಪರಿಸ್ಥಿತಿಗನುಸಾರವಾಗಿ ಅತ್ಯಾವಶ್ಯಕವಾಗಿ ಬೇಕಾದ ಬದ ಲಾವಣೆಗಳನ್ನೂ ಒಪ್ಪುತ್ತಾನೆ.

ದಂಡಗಳನ್ನು ವಿಧಿಸುವ ಶಾಸನವು ಆಜ್ಞಾಲೇಖವೆಂತಲೂ, ದಾನ ಸನ್ಮಾನಗಳಿಗೆ ಸಂಬಂಧಪಟ್ಟ ಶಾಸನಗಳು ಉಪಗ್ರಹ ಲೇಖವೆಂತಲೂ, ವರ್ಣ, ಪುರ, ಗ್ರಾಮ, ರಾಷ್ಟ್ರಗಳ ಆಪತ್ತಿನ ನಿವಾರಣೆಗಾಗಿ ರಚಿತವಾದ ಶಾಸನಗಳು ಪರಿಹಾರಲೇಖ ವೆಂತಲೂ, ಪ್ರವೃತ್ತಿಲೇಖ, ಪ್ರತಿಲೇಖ, ಸರ್ವತ್ರಗಲೇಖ ವೆಂತಲೂ—ನಾನಾವಿಧವಾದ ಶಾಸನಗಳು ಅರ್ಥಶಾಸ್ತ್ರದಲ್ಲಿ ವಿವ ರಿಸಲ್ಪಟ್ಟಿವೆ. ಇವುಗಳ ರಚನೆಗೆ ಅಮಾತ್ಯನಂತೆ ಸರ್ವಗುಣ ಸಂಪನ್ನನಾದವನನ್ನೇ ಲೇಖಕನನ್ನಾಗಿ ನೇಮಿಸುವುದು ವಾಡಿಕೆ.

**ಜನಪದ, ದುರ್ಗ ಮತ್ತು ಸೈನ್ಯ**—ಇವೂ ಸ್ವಾಮಿ ಮತ್ತು ಅಮಾತ್ಯರಂತೆ ಮುಖ್ಯವಾದ ರಾಜ್ಯಾಂಗಗಳು. ಜನ

ಪದದ ಬೆಂಬಲವಿಲ್ಲದಿದ್ದರೆ ರಾಜನಿಗೆ ಸ್ಥಾನವೇ ಇಲ್ಲ. ಹಸುವಿಲ್ಲದಿದ್ದರೆ ಹಾಲು ಹೇಗೆ ಸಿಕ್ಕುವುದಿಲ್ಲವೋ ಅದೇ ರೀತಿ ಜನಪದವಿಲ್ಲದಿದ್ದರೆ ರಾಜನೂ ಇಲ್ಲವೆಂದು ಕೌಟಿಲ್ಯನು ಹೇಳುತ್ತಾನೆ. ಯಾವ ಶಾಸನಗಳು ಹೊರಬಿದ್ದರೂ ಅವು ಜನಪದದ ಅಭ್ಯುದಯಕ್ಕೆ ಸಹಾಯಕವಾಗಬೇಕು. ಜನಪದದಲ್ಲಿ ಗ್ರಾಮ, ಸಂಗ್ರಹಣ, ಖಾರ್ವಟಿಕ, ದ್ರೋಣಮುಖ ಮತ್ತು ಸ್ಥಾನೀಯ—ಇವು ರಾಜಕೀಯ ವಿಭಾಗಗಳು. ಗ್ರಾಮಪಂಚಾಯಿತಿಗಳು, ವರ್ತಕ ಮಂಡಲಿಗಳು, ಕೂಲಿಗಾರರ ಸಂಘಗಳು, ವಿದ್ಯಾಸಂಸ್ಥೆಗಳು ಮೊದಲಾದುವು ಸಾಮಾಜಿಕಸಂಸ್ಥೆಗಳು. ಇವುಗಳು ದೇಶದ ಆರ್ಥಿಕಮೇಲ್ಮೆ, ಪ್ರಜಾಸೌಖ್ಯ, ಕೃಷಿ, ಕೈಗಾರಿಕೆ, ವ್ಯಾಪಾರ, ವಿದ್ಯೆ ಮತ್ತು ಧರ್ಮ ಇವುಗಳ ಮೇಲ್ವಿಚಾರಣೆಯನ್ನು ನೋಡಿಕೊಂಡು ಜನಗಳಿಗೆ ಔದ್ಯೋಗಿಕ ಮತ್ತು ಸಾಮೂಹಿಕ ಸ್ವಾತಂತ್ರ್ಯವನ್ನು ಕೊಟ್ಟು ಸಮಾಜದ ಏಳ್ಗೆಗೆ ಸಹಕಾರಿಗಳಾಗಿದ್ದುವು. ಇವುಗಳ ಸ್ವಾತಂತ್ರ್ಯಕ್ಕೆ ಕುಂದೆಂದರೆ ರಾಷ್ಟ್ರಕ್ಕೆ ಹಾನಿ. ಆದರೆ ಇವುಗಳಿಂದ ಪ್ರಭುತ್ವಕ್ಕಾಗಲಿ ಪ್ರಜಾಹಿತಕ್ಕಾಗಲಿ ಭಂಗವುಂಟಾಗದಂತೆ ನೋಡಿಕೊಳುವುದೂ ರಾಜನ ಕರ್ತವ್ಯ. ರಾಜನು ಅವುಗಳ ಉನ್ನತಿಗಾಗಿ ದುಡಿದು ಆ ಕಾಲದ ಸಾಮಾಜಿಕ ಜೀವನದ ಮೂಲಾಧಾರವಾದ ವರ್ಣಾಶ್ರಮಧರ್ಮಗಳನ್ನು ಕಾಪಾಡುವುದು ತನ್ನ ಮುಖ್ಯ ಕೆಲಸವೆಂದು ಗಣಿಸಬೇಕಾಗಿದ್ದಿತು. ಅಷ್ಟೆ ಅಲ್ಲ; ಜಿತರಾಷ್ಟ್ರಗಳಲ್ಲೂ ಇಂತಹ ಸಂಸ್ಥೆಗಳ ಸ್ವಾತಂತ್ರ್ಯಕ್ಕೆ ಕುಂದು ತರದೆ ನಡೆದುಕೊಳ್ಳಬೇಕಾಗಿದ್ದಿತು. ಹಾಗೆ ರಾಜನಿಂದ ಅವುಗಳಿಗೆ ತೊಂದರೆ ಉಂಟಾದರೆ ಜನರು ಉದ್ರೇಕಗೊಂಡು ರಾಜನನ್ನು ಸಿಂಹಾಸನಚ್ಯುತನನ್ನಾಗಿ ಮಾಡುವರೆಂಬ ಭಯವಿತ್ತು.

ರಾಜನಿಗೆ ಭೂಮಿ ಮತ್ತು ಪ್ರಜೆಗಳಮೇಲೆ ಸ್ವಾಮ್ಯವಿದೆಯೆ ಎಂಬ ಪ್ರಶ್ನೆ ಭಾರತೀಯ ದಂಡನೀತಿಯಲ್ಲಿ ಬಹು ಮುಖ್ಯ ವಾದುದು. ರಾಜನು ಭೂಮಿಗೆ ಮಾತ್ರ ಒಡೆಯ, ಜನಗಳಮೇಲೆ ಮನಸ್ವಿಯಾಗಿ ವರ್ತನೆಮಾಡುವ ಅಧಿಕಾರವನ್ನು ಪಡೆದಿಲ್ಲ ಎಂಬ ಅಂಶವನ್ನು ಕೌಟಿಲ್ಯನು ಒಂದು ಸಂದರ್ಭದಲ್ಲಿ ಹೇಳಿ ದ್ದಾನೆ. ಇದನ್ನೇ ಅರ್ಥಶಾಸ್ತ್ರದಮೇಲೆ ಟೀಕೆ ನಡೆಸಿರುವ ಭಟ್ಟ ಸ್ವಾಮಿಯೂ—

**"ರಾಜಾ ಭೂಮೇಃ ಪತಿರ್ದೃಷ್ಟಃ ಶಾಸ್ತ್ರಜ್ಞೈರುದಕಸ್ಯ ಚ ।**
**ತಾಭ್ಯಾಮನ್ಯತ್ತು ಯದ್ದ್ರವ್ಯಂ ತತ್ರ ಸ್ವಾಮ್ಯಂ ಕುಟುಂಬಿನಾಂ[1] ॥**

ಮೇಲಿನ ಶ್ಲೋಕದಲ್ಲಿ ಹೇಳಿದ್ದಾನೆ. ರಾಜನು ಭೂಮಿ ಮತ್ತು ಉದಕಕ್ಕೆ ಪತಿ: ಮಿಕ್ಕ ಎಲ್ಲಾ ಸಂಪತ್ತಿಗೂ ಕುಟುಂಬಿಗಳು ರಾಜನಿಗೆ ಸರಿಸಮಾನವಾದ ಹಕ್ಕನ್ನು ಹೊಂದಿದ್ದಾರೆಂಬುದು ಈ ಶ್ಲೋಕದ ಅರ್ಥ. ಇದು ಚರ್ಚಾಸ್ಪದವಾದ ವಿಷಯ. ರಾಜನೂ ಅವನ ಪ್ರಜೆಗಳೂ ಭೂಮಿಯ ಸ್ವಾಮಿತ್ವದಲ್ಲಿ ಸಮವಾದ ಹಕ್ಕುಳ್ಳವರು ಎಂದು ಡಾ|| ಥಾಮಸ್‌ರವರು ಈ ಶ್ಲೋಕಕ್ಕೆ ಅರ್ಥಮಾಡುತ್ತಾರೆ.* ರಾಜನು ಈ ದೃಷ್ಟಿ ಯಿಂದ ಪ್ರಜೆಗಳಿಗೆ ಸಮಾನಸ್ಕಂಧನಾದರೆ ಅವನಿಗೆ ತನ್ನ ಅಧಿಕಾರವನ್ನು ದುರುಪಯೋಗಪಡಿಸುವ ಹಕ್ಕು ಇಲ್ಲ. ನ್ಯಾಯ ವಾದ ರೀತಿಯಲ್ಲಿ ಮಾತ್ರ ಜನಗಳನ್ನು ಕಾಪಾಡುವ ಪ್ರತಿನಿಧಿ ಅವನು. ಆದರೆ ಡಾ|| ಸ್ಮಿತ್ ಮತ್ತು ಡಾ|| ಜಯಸ್ವಾಲ್

---

[1] K. P. Jayaswal: Hindu Polity. II. p. 182.

* ಇದಕ್ಕೆ ಬೇರೆ ಆಧಾರವೂ ಉಂಟು: ತುಲ್ಯವೇತನೋಸ್ಮಿ । ಭವದ್ಭಿಸ್ಸಹ ಭೋಗ್ಯಮಿದಂ ರಾಜ್ಯಂ X. 3.

ರವರು "ಕುಟುಂಬಿನಾಂ" ಎಂಬ ಪದಕ್ಕೆ ರಾಜನ ಕುಟುಂಬ ಎಂಬ ಅರ್ಥವನ್ನು ಕೊಟ್ಟು, ರಾಷ್ಟ್ರಕ್ಕೆ ಒಡೆಯನಾದ ರಾಜನಿಗೆ ಭೂಮಿ, ಉದಕ ಮತ್ತು ಪ್ರಜೆಗಳಮೇಲೆ ಸಂಪೂರ್ಣ ಅಧಿಕಾರ ವಿದೆ ಎಂದು ಹೇಳುತ್ತಾರೆ. ಪ್ರಾಚೀನ ಇತಿಹಾಸಗಳನ್ನು ನೋಡಿದರೆ ರಾಜನು ಪ್ರಜೆಗಳ ಪ್ರತಿನಿಧಿಯಾಗಿ ಅವರಿಗೆ ಸೇವೆ ಸಲ್ಲಿಸಿ ಅದಕ್ಕೆ ಪ್ರತಿಫಲರೂಪವಾಗಿ ತನ್ನ ಸ್ಥಾನವನ್ನು ಪಡೆದಿ ದ್ದಾನೆಂಬುದಕ್ಕೂ, ಹಾಗೆ ಅವನು ಯೋಗ್ಯರೀತಿಯಲ್ಲಿ ವರ್ತಿಸದೆ ಕರ್ತವ್ಯಭ್ರಷ್ಟನಾದರೆ ಪ್ರಜೆಗಳು ಆತನನ್ನು ಸಿಂಹಾಸನಚ್ಯುತನ ನ್ನಾಗಿ ಮಾಡುತ್ತಿದ್ದರೆಂಬುವದಕ್ಕೂ ನಿದರ್ಶನಗಳಿವೆ. ಇದರಿಂದ ಪ್ರಜೆಗಳಿಗೆ ಆ ಕಾಲದಲ್ಲಿ ಎಷ್ಟರಮಟ್ಟಿನ ಅಧಿಕಾರವಿದ್ದಿ ತೆಂಬುದು ವ್ಯಕ್ತವಾಗುವುದಲ್ಲದೆ ಪ್ರಜೆಗಳು ಭೂಮಿಗೆ ಒಡೆಯ ರೆಂದೂ, ಭೂಮಿ ಮತ್ತು ಪ್ರಜೆಗಳ ಸಂರಕ್ಷಣೆ ರಾಜನಿಗೆ ಸೇರಿ ದುದೆಂದೂ ವ್ಯಕ್ತವಾಗುತ್ತದೆ. ಕೌಟಿಲ್ಯನ ಪ್ರಕಾರ ಪ್ರಜೆಗಳಿಗೂ ರಾಜನಿಗೂ ಒಂದು ವಿಧವಾದ ಪರಸ್ಪರ ನಿಕಟಸಂಬಂಧವು ಕರಾರಿನ ರೂಪದಲ್ಲಿದ್ದಂತೆ ಕಾಣುತ್ತದೆ. ಏಕೆಂದರೆ ರಾಜನು ಕರ್ತವ್ಯಭ್ರಷ್ಟನಾದರೆ ಹೇಗೆ ತನ್ನ ಸ್ಥಾನವನ್ನು ಕಳೆದುಕೊಳ್ಳು ತ್ತಿದ್ದನೋ ಅದೇ ರೀತಿ ರೈತನು ಕಂದಾಯವನ್ನು ಕೊಡುವು ದನ್ನು ನಿಲ್ಲಿಸಿದರೆ ಅವನ ಭೂಸ್ವಾಮಿತ್ವವು ನಾಶವಾಗುತ್ತಿದ್ದಿತು.

ಜನಪದವನ್ನು ಒಳನಾಡಿನಿಂದಾಗಲೀ ಅಥವಾ ವಿದೇಶ ಗಳಿಂದಾಗಲೀ ಅಪಾಯ ತಟ್ಟದಂತೆ ಕಾಪಾಡಬೇಕಾದರೆ ಸೈನ್ಯ ಮತ್ತು ದುರ್ಗಗಳು ಆವಶ್ಯಕವಾಗಿದ್ದವು. ಸಂಚುಕಾರರು, ಅನ್ಯದೇಶದ ಗೂಢಚಾರರು, ಸ್ವಾರ್ಥಸಾಧಕರು ಅಂತಃ ಕಲಹಗಳನ್ನು ಬಿತ್ತಿ ಪ್ರಜೆಗಳಿಗೆ ಹಾನಿಯನ್ನುಂಟುಮಾಡ ಬಹುದು. ಕಲಹಗಳಿಂದ ಕೂಡಿದ ರಾಜ್ಯವನ್ನು ನೆರೆಯ

ರಾಜರು ಆಕ್ರಮಿಸಲು ಅನುಕೂಲವಾಗುವುದು. ರಾಜನು ಇಂಥಾ ಗೊಂದಲಗಳಿಗೆ ಅವಕಾಶವನ್ನು ಕೊಟ್ಟು ಅಜಾಗರೂಕನಾಗಿದ್ದರೆ ಸಮಯವನ್ನು ಕಾಯುತ್ತ ಸಿದ್ಧವಾಗಿರುವ ಪರರಾಷ್ಟ್ರಗಳು ಈ ರಾಜ್ಯವನ್ನು ನುಂಗುವುವು. ಈ ತೆರನಾದ ತೊಂದರೆಗಳಿಂದ ದೇಶವನ್ನು ಪಾರುಮಾಡುವುದಕ್ಕಾಗಿ ರಾಜ್ಯದ ಎಲ್ಲೆಗಳಲ್ಲಿಯೂ ಮುಖ್ಯಭಾಗಗಳಲ್ಲಿಯೂ ಕೋಟೆಕೊತ್ತಲಗಳನ್ನು ಕಟ್ಟಿಸಿ ಪರದಾಳಿಯನ್ನು ಯಾವ ಕ್ಷಣದಲ್ಲಿ ಬೇಕಾದರೂ ಎದುರಿಸಲು ಸಾಕಾದಷ್ಟು ಸೈನ್ಯವನ್ನು ಇಟ್ಟಿರಬೇಕು. ದೇಶದ ಒಳಗೆ ನಡೆಯಬಹುದಾದ ಕೃತ್ರಿಮಗಳನ್ನು ಅಡಗಿಸುವಷ್ಟು ಜಾಗರೂಕನಾಗಿರಬೇಕು. ದೇಶದ ಹೆದ್ದಾರಿಗಳ ಬಾಗಿಲುಗಳಲ್ಲೂ, ಪರ್ವತ, ಬೆಟ್ಟ ಮೊದಲಾದ ಸ್ವಾಭಾವಿಕ ತಡೆ ಇಲ್ಲದ ಮೈದಾನಪ್ರದೇಶದಲ್ಲೂ, ಕೃಷಿ ಕೈಗಾರಿಕೆಗಳ ಕೇಂದ್ರಗಳಲ್ಲಿಯೂ, ನೀರು ಆಹಾರಗಳು ಸುಲಭವಾಗಿ ದೊರಕದ ಮರುಭೂಮಿಯ ಹತ್ತಿರದಲ್ಲೂ, ನದಿಯ ದ್ವೀಪಗಳಲ್ಲಿಯೂ ಕೋಟೆಗಳನ್ನು ಕಟ್ಟಿ ಅಲ್ಲಿ ಸೈನ್ಯ ಮತ್ತು ಕೋಶಗಳನ್ನು ಇಡಬೇಕು. ಇವುಗಳಲ್ಲಿ ಔದಕ ಮತ್ತು ಪರ್ವತ ದುರ್ಗಗಳೇ ಅತಿ ಮುಖ್ಯವಾದುವು. ಆಕ್ರಮಣ ಭಯವಿದ್ದಾಗ ರಾಜನು ದುರ್ಗಮವೂ ಅಭೇದ್ಯವೂ ಆದ ದುರ್ಗಗಳನ್ನು ತನ್ನ ನೆಲೆಯನ್ನಾಗಿ ಉಪಯೋಗಿಸಿಕೊಳ್ಳಲು ಸಿದ್ಧಪಡಿಸಿಟ್ಟುಕೊಂಡಿರಬೇಕಾಗಿದ್ದಿತು.

ರಾಷ್ಟ್ರ ರಕ್ಷಣೆಗೆ ದುರ್ಗವು ಎಷ್ಟು ಮುಖ್ಯವಾಗಿದ್ದಿತೋ ಸೈನ್ಯವೂ ಅಷ್ಟೇ ಪ್ರಾಧಾನ್ಯವುಳ್ಳದ್ದಾಗಿದ್ದಿತು. ಸೈನ್ಯವು ಚತುರಂಗಬಲದಿಂದ ಕೂಡಿ ಶಿಸ್ತಿನಲ್ಲಿತ್ತು. ಪ್ರತಿ ಬಲದಲ್ಲೂ ಅನೇಕ ವಿಭಾಗಗಳಿದ್ದವು. ಸೈನ್ಯಕ್ಕೆಲ್ಲಾ ಒಬ್ಬ ಮುಖ್ಯ ದಂಡನಾಯ

ಕನೂ ಅನಂತರ ಪ್ರತಿಬಲದ ಮೇಲೂ ಒಬ್ಬೊಬ್ಬ ಮುಖ್ಯಾಧಿಕಾರಿಯೂ ಇದ್ದರು. ಇವರ ಕೈಕೆಳಗೆ ಅನೇಕ ವಿಧವಾದ ಅಧಿಕಾರಿಗಳಿದ್ದರು. ಯೋಧ ವೃತ್ತಿಯು ಬಹಳ ನಿಯಮಬದ್ಧವಾಗಿದ್ದಿತು. ದಂಡಯಾತ್ರೆಯ ಕಾಲದಲ್ಲಿ ಆಕ್ರಮಿತ ಪ್ರದೇಶಗಳಲ್ಲಿ ಸ್ತ್ರೀಯರನ್ನೂ ದುರ್ಬಲರನ್ನೂ ನಿರಾಶ್ರಿತರನ್ನೂ ಹಿಂಸಿಸಕೂಡದೆಂದೂ, ಪ್ರದೇಶದ ಕೃಷಿಕೈಗಾರಿಕೆಗಳನ್ನು ನಾಶಮಾಡಕೂಡದೆಂದೂ ಕಟ್ಟಿದ್ದಿತು. ಆ ಕಾಲದಲ್ಲಿ ಪರಕೀಯರ ಧಾಳಿಯ ಭಯವು ಯಾವ ಕ್ಷಣವೂ ತಪ್ಪಿರಲಿಲ್ಲವಾದುದರಿಂದ ರಾಜನು ಸೈನ್ಯವನ್ನು ಸದಾಕಾಲದಲ್ಲೂ ಸಜ್ಜುಗೊಳಿಸಿ ಇಟ್ಟಿರಬೇಕಾಗಿದ್ದಿತು.

**ಕೋಶ**--ರಾಜ್ಯಾಡಳಿತಕ್ಕೆ ಮೂಲಪ್ರಾಯವಾದುದು ಕೋಶ. ರಾಜಭಂಡಾರದಲ್ಲಿ ಧನವಿದ್ದರೆ ಸೈನ್ಯ ಮತ್ತು ಇತರ ಎಲ್ಲಾ ಅಂಗಗಳೂ ನಡೆಯುತ್ತವೆ; ಕೋಶವಿಲ್ಲದಿದ್ದರೆ ರಾಜ್ಯವೇ ಇಲ್ಲ. ಅಧಿಕಾರಿಗಳ ವೇತನ, ಸೈನ್ಯಕ್ಕಾಗುತ್ತಿದ್ದ ವೆಚ್ಚ, ದಾನ ಧರ್ಮಗಳಿಗಾಗಿ ಕೊಡುತ್ತಿದ್ದ ಹಣ-ಇವುಗಳಿಗೆಲ್ಲಾ ಕೋಶದಿಂದಲೇ ಒದಗಿಸಬೇಕಾಗಿದ್ದಿತು. ಕರಗಳನ್ನು ಧರ್ಮಕ್ಕನುಸಾರವಾಗಿ ನಿಯಮಿಸುವುದು ವಾಡಿಕೆಯಲ್ಲಿದ್ದಿತು. ಸಾಧುಗಳು, ಬ್ರಾಹ್ಮಣರು, ಮಠಗಳು ಮತ್ತು ವಿದ್ಯಾಪೀಠಗಳು ಮುಂತಾದುವು ಕರವನ್ನು ಕೊಡುತ್ತಿರಲಿಲ್ಲ. ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯಲ್ಲಿ ಗೊಂದಲ ಉಂಟಾದಾಗ ತೆರಿಗೆ ವಸೂಲಿಯನ್ನು ನಿಯಮಿತವಾದ ಕಾಲದವರೆಗೆ ಬಿಡುತ್ತಿದ್ದರು. ಬ್ರಾಹ್ಮಣರು ತಮ್ಮ ವರ್ಣದ ವೃತ್ತಿಗಳನ್ನು ಬಿಟ್ಟು ಇತರ ವರ್ಣದವರ ವೃತ್ತಿಗಳನ್ನು ಅನುಸರಿಸಿದರೆ ಆಗ ಮಾತ್ರ ಅವರು ತೆರಿಗೆಯನ್ನು ಕೊಡಬೇಕಾಗಿದ್ದಿತು. ವೃತ್ತಿಗಳು ವರ್ಣವನ್ನು ಅನು

ಸರಿಸಲೇಬೇಕೆಂಬ ನಂಬಿಕೆಯು ಕೌಟಿಲ್ಯನ ಕಾಲದಲ್ಲಿ ಬಿಗಿಯಾಗಿರಲಿಲ್ಲ. ಜನರು ತಮ್ಮ ವೃತ್ತಿಯನ್ನೇ ಅಲ್ಲದೆ ಬೇರೆ ವೃತ್ತಿಯನ್ನು ಬೇಕಾದರೂ ಅನುಸರಿಸಲು ಸ್ವತಂತ್ರರಾಗಿದ್ದರು. ಕ್ಷಾಮ ರೋಗ ಮೊದಲಾದ ವಿಪತ್ತುಗಳು ರಾಷ್ಟ್ರಕ್ಕೆ ಒದಗಿದರೆ ಆ ಕಾಲದಲ್ಲಿ ಕಂದಾಯವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಹೆಂಗಸರು, ವ್ಯಾಧಿಗ್ರಸ್ತರು, ವಿದ್ಯಾರ್ಥಿಗಳು ಕುರುಡ ಕುಂಟರೇ ಮೊದಲಾದವರು ಕರವನ್ನು ಕೊಡಬೇಕಾದುದಿರಲಿಲ್ಲ. ನಿಯುತವಾದುದಕ್ಕಿಂತ ಹೆಚ್ಚು ತೆರಿಗೆಯನ್ನು ವಿಧಿಸಿದರೆ ಅಥವಾ ಜನಗಳ ಶಕ್ತಿಗೆ ಮೀರಿ ತೆರಿಗೆಗಳನ್ನು ವಿಧಿಸಿದರೆ ಆಗ ಪ್ರಜೆಗಳ ರಕ್ತವನ್ನು ಹೀರಿದಂತಾಗುವುದೆಂಬುದು ಕೌಟಿಲ್ಯನ ಅಭಿಪ್ರಾಯ. ಹೆಚ್ಚು ತೆರಿಗೆಗಳನ್ನು ವಿಧಿಸುವುದು ರಾಜನಿಗೆ ಅಪಾಯಕರವೆಂದು ಇದರಿಂದ ವ್ಯಕ್ತವಾಗುತ್ತದೆ. ಇಷ್ಟೇ ಅಲ್ಲದೆ ಯುದ್ಧ ಕ್ಷಾಮ ಮೊದಲಾದ ಆಪತ್ಕಾಲದ ಖರ್ಚಿಗಾಗಿ ಧನವನ್ನು ಶೇಖರಿಸಿಡಬೇಕಾಗಿದ್ದಿತು. ರಾಜಾದಾಯದ ಯಾವ ಭಾಗವನ್ನು ಈ ಕೆಲಸಗಳಿಗಾಗಿ ಇಡಬೇಕೆಂಬ ಅಂಶವನ್ನು "ಕೋಶಾಭಿಸಂಹರಣ" ಎಂಬ ಐದನೆಯ ಅಧಿಕರಣದ ಎರಡನೆಯ ಅಧ್ಯಾಯದಲ್ಲಿ ಉಲ್ಲೇಖಿಸಿದ್ದಾನೆ. ದೇಶದ ಖರ್ಚು ಮತ್ತು ಆದಾಯಗಳು ಸರಿತೂಗುವಂತೆ ಮಾಡುವುದು ಕೋಶರಚನೆಯ ಉದ್ದೇಶ. ಕೌಟಿಲ್ಯನ ದೃಷ್ಟಿಯಲ್ಲಿ ರಾಷ್ಟ್ರಾಭ್ಯುದಯವೇ ಎಲ್ಲ ಕೆಲಸಗಳ ಮುಖ್ಯಗುರಿಯಾದುದರಿಂದ ಪ್ರಾಚೀನಕಾಲದಿಂದಲೂ ರೂಢಿಯಲ್ಲಿ ಬಂದ ತೆರಿಗೆಗಳಿಂದ ಉತ್ಪನ್ನವಾದ ಆದಾಯವು ಸಾಲದಿದ್ದಲ್ಲಿ ಭೂಕಂದಾಯವಲ್ಲದೆ ಖನಿ, ಉಪ್ಪು, ಅರಣ್ಯ, ಮದಿರಾ ಮತ್ತು ಸೂನಾಗೃಹಗಳು, ಆಮದು ರಫ್ತುಗಳು ಇವುಗಳ ಮೇಲೆ ಕರಗಳನ್ನು ವಿಧಿಸಿ ರಾಜಾದಾಯವನ್ನು ಹೆಚ್ಚಿಸಬಹು

ದೆಂದು ಹೇಳಿದ್ದಾನೆ. ಅಲ್ಲದೆ ಪ್ರತಿದಿನವೂ ಆದಾಯವೆಚ್ಚಗಳ ಖಾತೆಗಳನ್ನು ಪರೀಕ್ಷಿಸಿ ವೆಚ್ಚವು ಹೆಚ್ಚಾಗಿ ಕಂಡುಬಂದಲ್ಲಿ ಅದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಬೇಕು ಎಂದು ರಾಜನಿಗೆ ಎಚ್ಚರಿಕೆ ಕೊಟ್ಟಿದ್ದಾನೆ.

**ಕರ್ಮಸು ಚೈಷಾಂ ನಿತ್ಯಂ ಪರೀಕ್ಷಾಂ ಕಾರಯೇತ್**

II-9.

ಕಂದಾಯಗಳಲ್ಲೆಲ್ಲಾ ಭೂಕಂದಾಯವೇ ಪ್ರಧಾನವಾದುದು. ಫಸಲಿನ ಆರನೆ ಒಂದು ಭಾಗ (ಧಾನ್ಯಷಡ್ಭಾಗ) ರಾಜನಿಗೆ ಸಲ್ಲುತ್ತಿದ್ದಿತು. ಕೆರೆ, ಸರೋವರ, ಮೊದಲಾದ ಜಲಾಶಯದ ಆಸರೆಯಲ್ಲಿ ಬೆಳೆದ ಬೆಳೆಗಳಲ್ಲಿ ಷಡ್ಭಾಗವಲ್ಲದೆ ಐದನೆ ಒಂದು ಭಾಗ ಉದಕಭಾಗವನ್ನೂ ಕೊಡಬೇಕಾಗಿದ್ದಿತು. ಭೂಮಿಯ ಮೇಲೆ ಹಾಕಿದ್ದ ಎಲ್ಲ ಕಂದಾಯಗಳೂ ಸೇರಿ ಒಟ್ಟು ಫಸಲಿನಲ್ಲಿ $\frac{3}{10}$ ಭಾಗ ರಾಜನಿಗೆ ಸಲ್ಲುತ್ತಿತ್ತು.

**ಮಿತ್ರ**—ಕೌಟಿಲ್ಯನ ಕಾಲದಲ್ಲಿ ಭರತಖಂಡವು ಅನೇಕ ಸಣ್ಣ ಸಣ್ಣ ರಾಜ್ಯಗಳಾಗಿ ಒಡೆದುಹೋಗಿ ದುರ್ಬಲವಾಗಿದ್ದಿತು. ರಾಷ್ಟ್ರವು ಪ್ರಬಲವಾಗಿಯೂ ಮತ್ತು ಸ್ವತಂತ್ರವಾಗಿಯೂ ಇರಬೇಕಾದರೆ ಅದು ಇತರ ರಾಷ್ಟ್ರಗಳೊಡನೆ ವಿವೇಕಯುತವಾದ ಸಂಬಂಧವನ್ನು ಹೊಂದಿರಬೇಕು. ಯಾವುದರೊಡನೆ ಸ್ನೇಹ ಬೆಳೆಸಬೇಕು, ಯಾವುದರೊಡನೆ ಸ್ನೇಹ ಬೆಳೆಸಬಾರದು, ಯಾವುದರಲ್ಲಿ ತಾಟಸ್ಥ್ಯನೀತಿಯನ್ನು ಅನುಸರಿಸಬೇಕು, ತಾನೂ ತನ್ನ ಮಿತ್ರರಾಷ್ಟ್ರಗಳೂ ಹಿತವಾಗಿ ಬದುಕುವುದು ಹೇಗೆ—ಎಂಬೀವಿಷಯಗಳಿಗೆ ಗಮನ ಸಲ್ಲಬೇಕು. ಶಾಂತಿ ಯಾವಾಗ, ಸಂಧಾನ ಯಾವಾಗ, ಯುದ್ಧವು ಯಾವಾಗ ಎಂಬ ವಿಷಯವನ್ನು ಪರ್ಯಾಲೋಚಿಸಬೇಕು. ಈ ವಿಷಯಕ್ಕೆ

ಸೇರಿದ ನೀತಿ ಬಹುಮುಖ್ಯವಾದುವರಿಂದ ಕೌಟಿಲ್ಯನು ತನ್ನ ಗ್ರಂಥದ ಮೂರನೆ ಒಂದು ಭಾಗವನ್ನು ಇದರ ವಿವರಣೆಗೆ ಮೀಸಲಾಗಿಟ್ಟಿದ್ದಾನೆ.

ರಾಷ್ಟ್ರರಾಷ್ಟ್ರಗಳ ಪರಸ್ಪರ ಸಂಬಂಧಗಳು ನಾಲ್ಕುವಿಧವಾಗಿವೆ. ನೆರೆಯರಾಜರೊಡನೆ ಸ್ನೇಹಭಾವದಿಂದ ವರ್ತಿಸುವವನು ಮಿತ್ರ. ಪ್ರಕಟವಾಗಿ ಶತ್ರುತ್ವವನ್ನು ತೋರಿಸುವವನು ಸಹಜ ಶತ್ರು. ಶತ್ರುತ್ವದಸೂಚನೆಯನ್ನು ಕೊಡದೆ ಆಕ್ರಮಣ ನಡೆಸುವವನು ಕೃತ್ರಿಮಶತ್ರು. ಎರಡು ಶತ್ರುರಾಷ್ಟ್ರಗಳ ನಡುವೆ ಇದ್ದು ಯಾರಿಗೂ ಸಹಾಯಮಾಡುವುದಕ್ಕೆ ಇಷ್ಟಪಡದಿರುವವನು ಉದಾಸೀನ. ಈ ಸಂಬಂಧಗಳನ್ನುಳ್ಳ ರಾಷ್ಟ್ರಗಳ ವ್ಯೂಹಕ್ಕೆ ಮಂಡಲವೆಂದು ಹೆಸರು. ಮಂಡಲದೊಳಗಿನ ರಾಜ್ಯಗಳು ಒಂದರೊಡನೊಂದು ಸಂಧಿಮಾಡಿಕೊಳ್ಳಬಹುದು. ವಿಗ್ರಹವನ್ನು ನಡೆಸಬಹುದು; ಔದಾಸೀನ್ಯವನ್ನು ತೋರಿಸಬಹುದು; ಸದಾ ಯುದ್ಧಕ್ಕೆ ಸಿದ್ಧವಾಗಿರಬಹುದು. ಅಥವಾ ಯುದ್ಧನಿಮಿತ್ತವಾಗಿ ನೆರೆಯರಾಜರ ಸಹಾಯವನ್ನು ಕೋರಬಹುದು; ಅಥವಾ ಒಂದು ರಾಜ್ಯದೊಡನೆ ಸಂಧಿಮಾಡಿಕೊಂಡು ಮತ್ತೊಂದರೊಡನೆ ವಿರೋಧದಿಂದ ವರ್ತಿಸಬಹುದು. ಆದರೆ ಯಾವ ರೀತಿಯ ಸಂಬಂಧ ನಡೆದರೂ ಅದು ಶಾಸನಬದ್ಧವಾಗಿರಬೇಕು. ಪರರಾಷ್ಟ್ರದೊಡನೆ ಒಂದು ಯುದ್ಧದಲ್ಲಿ ಭಾಗವಹಿಸಬೇಕಾದರೂ ಅದರ ಪ್ರತಿಫಲವು ತನ್ನ ಸ್ವಾತಂತ್ರ್ಯರಕ್ಷಣೆಗಾಗಲೀ ಅಥವಾ ದೇಶೋನ್ನತಿಗಾಗಲೀ ಸಹಾಯಕವಾಗುವಂತಿರಬೇಕು. ರಾಷ್ಟ್ರರಕ್ಷಣೆ ಮತ್ತು ಲಾಭ—ಇವು ಸಿದ್ಧಿಸದಿದ್ದಾಗ ಯುದ್ಧವು ನಡೆಯುತ್ತಿದ್ದರೂ ಅದನ್ನು ನಿಲ್ಲಿಸಿ ಒಪ್ಪಂದವನ್ನು ಮಾಡಿಕೊಳ್ಳಬೇಕು.

ಮಂಡಲದಲ್ಲಿ ಯಾವುದಾದರೂ ರಾಜ್ಯವು ಅತಿ ಪ್ರಬಲವಾಗಿ ಬಲಹೀನವಾದ ನೆರೆಯ ರಾಷ್ಟ್ರದ ಸ್ವಾತಂತ್ರ್ಯಕ್ಕೆ ಕುಂದು ತರುವಂತಿದ್ದಲ್ಲಿ ಉಳಿದ ಶಕ್ತಿಯುತರಾಷ್ಟ್ರಗಳು ದುರ್ಬಲರಾಷ್ಟ್ರದೊಡನೆ ಸಂಶ್ರಯವನ್ನು ಮಾಡಿಕೊಂಡು ಅದನ್ನು ಕಾಪಾಡುವುದಲ್ಲದೆ ರಾಜ್ಯಶಕ್ತಿ ಸಮತೆಯನ್ನು ಕಾಪಾಡುವುದು ಅವುಗಳ ಕರ್ತವ್ಯ. ಎರಡು ರಾಷ್ಟ್ರಗಳು ಪರಸ್ಪರ ಸಹಾಯಕ್ಕಾಗಿ ಶಾಸನದ ಮೂಲಕ ಒಪ್ಪಂದ ಮಾಡಿಕೊಂಡಿದ್ದಲ್ಲಿ ತಮ್ಮ ಪ್ರತಿಜ್ಞೆಯನ್ನು ಕಾಪಾಡಿಕೊಳ್ಳಬೇಕು: ತಪ್ಪಿದಲ್ಲಿ ಅವುಗಳಿಗೆ ಇಹಪರಲೋಕಗಳೆರಡರಲ್ಲೂ ಗತಿ ಕೆಡುವುದು. ಕೌಟಿಲ್ಯನ ಪ್ರಕಾರ ಸ್ವಧರ್ಮಪ್ರವರ್ತಕನಾದ ನೆರೆಯ ರಾಜನಮೇಲೆ ದಂಡಯಾತ್ರೆ ನಡೆಸುವುದೂ, ಇನ್ನೊಂದರೊಡನೆ ಮಾಡಿಕೊಂಡಿರುವ ಶಾಸನಬದ್ಧವಾದ ಸಂಬಂಧವನ್ನು ಮುರಿಯುವುದೂ ಅಧರ್ಮ.

ರಾಜ್ಯವಿಸ್ತರಣೆಯು ರಾಜನ ಮುಖ್ಯೋದ್ದೇಶವಾದರೂ ಜಿತರಾಷ್ಟ್ರಗಳ ವಿಷಯದಲ್ಲಿ ರಾಜನು ಹೇಗೆ ವರ್ತಿಸಬೇಕೆಂಬ ಅಂಶವನ್ನು ಕೌಟಿಲ್ಯನು ಚರ್ಚಿಸಿರುವುದು ಗಮನಾರ್ಹವಾಗಿದೆ. ಜಿತರಾಷ್ಟ್ರಗಳಲ್ಲಿ ಸಂಪೂರ್ಣ ಅಧಿಕಾರವನ್ನು ನಡೆಸುವ ಹಕ್ಕು ದಂಡೋಪನಾಯಕನಿಗೆ ಸೇರಿದ್ದರೂ ಅವನು ಪ್ರಾಚೀನವಾಗಿ ಬಂದ ರಾಜಮನೆತನಕ್ಕೇ ಆಡಳಿತವನ್ನು ಒಪ್ಪಿಸಬೇಕು. ಈ ವಿಷಯವಾಗಿ ದಂಡೋಪನತನೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕು. ಶಾಂತಿಸಂಧಾನಗಳನ್ನು ನಡೆಸುವಾಗ ದುರಾಗ್ರಹ ಮಾಡುವುದಕ್ಕಿಂತಲೂ ನ್ಯಾಯ ಮತ್ತು ಸ್ಥೈರಣೆಯಿಂದ ವರ್ತಿಸಬೇಕು. ಜಿತರಾಷ್ಟ್ರದ ಧಾರ್ಮಿಕ, ಸಾಮಾಜಿಕ, ನಡತೆಗಳನ್ನು ಸನ್ಮಾನಿಸಬೇಕು. ಅವರ ಉಡುಪು ಭಾಷೆಗಳಿಗೆ ಮರ್ಯಾದೆ ತೋರಿಸಬೇಕು. ಅವರಲ್ಲಿ ಅವಗುಣಗಳಿದ್ದರೂ ಅವನ್ನು ತನ್ನ

ಸುಗುಣ ಪ್ರದರ್ಶನದಿಂದ ಮುಚ್ಚಬೇಕು. ಜನರು ನಿರ್ಭಯರಾಗಿ ವರ್ತಿಸುವಂತೆ ಸಂಪೂರ್ಣ ಅಭಯಪ್ರದಾನಮಾಡಿ ಅವರ ಏಳಿಗೆಗೂ ಸುಸ್ಥಿತಿಗೂ ಅನುಕೂಲಗಳನ್ನು ಕಲ್ಪಿಸಬೇಕು. ಧರ್ಮಕ್ಕನುಸಾರವಾದ ಕಾನೂನುಗಳನ್ನು ಜಾರಿಗೆ ತಂದು ಆಡಳಿತವನ್ನು ಕ್ರಮಪಡಿಸಬೇಕು.

**ಜಿತ್ವಾ ಚ ಪೃಥಿವೀಂ ವಿಭಕ್ತವರ್ಣಾಶ್ರಮಾಂ ಸ್ವಧರ್ಮೇಣ ಭುಂಜೀತ** XIII 4.

ಉತ್ತಮವಾದ ರಾಜನೀತಿಯಿಂದ ನಡೆದು ಜಿತರಾಜ್ಯದ ಪ್ರಜೆಗಳಿಂದ ಪ್ರೀತಿಸಂಪಾದನೆ ಮಾಡಬೇಕು. ಹೀಗೆ ನಡೆಯದೆ ತಾನು ಮಾಡಿಕೊಂಡಿದ್ದ ಕರಾರನ್ನು ಮುರಿದು ಪ್ರಜೆಗಳನ್ನು ದಂಡಿಸಿದರೆ, ಆ ದೇಶದ ಪ್ರಜೆಗಳು ಮಾತ್ರವಲ್ಲದೆ ತನ್ನ ಪ್ರಜೆಗಳೂ ಎದುರು ಬೀಳಬಹುದು. ದೇಶೋನ್ನತಿಯಲ್ಲೇ ನಿರತರಾದ ತನ್ನ ಮಂತ್ರಿಗಳು ತನ್ನನ್ನು ಸಿಂಹಾಸನಚ್ಯುತನನ್ನಾಗಿ ಮಾಡಬಹುದು.

---

## ೫. ಆಡಳಿತಕ್ರಮ

ರಾಜನು ಸಮಸ್ತರಾಜಕಾರ್ಯಗಳನ್ನೂ ವಿಭಾಗಿಸಿ ಒಂದೊಂದು ಕಾರ್ಯಕ್ಕೆ ಒಬ್ಬೊಬ್ಬ ಅಮಾತ್ಯನನ್ನು ನೇಮಿಸಬೇಕು. ಅರ್ಥಶಾಸ್ತ್ರದಲ್ಲಿ ಹದಿನೆಂಟು ಅಮಾತ್ಯರ ಒಂದು ಪಟ್ಟಿ ಇದೆ.

ಇದರಿಂದ ಆಡಳಿತವನ್ನು ಹದಿನೆಂಟು ಶಾಖೆಗಳಾಗಿ ವಿಭಾಗಿಸಿದ್ದರೆಂಬುದು ವ್ಯಕ್ತವಾಗುತ್ತದೆ. ಪ್ರತಿಶಾಖೆಯ ಅಧ್ಯಕ್ಷನೂ ಮಂತ್ರಿಪರಿಷತ್ತಿನ ಸದಸ್ಯನಾಗಿದ್ದನು. ಪ್ರತಿಯೊಬ್ಬನೂ ತನ್ನ ತನ್ನ ಶಾಖೆಯ ಕಾರ್ಯಗಳನ್ನು ಸ್ವತಂತ್ರವಾಗಿ ನಡೆಸುತ್ತ ಸಮಸ್ತ ರಾಜಕಾರ್ಯಗಳಲ್ಲೂ ರಾಜನಿಗೆ ಮಂತ್ರಾಲೋಚನೆಯನ್ನು ಹೇಳುತ್ತಿದ್ದನು.

ಧರ್ಮಾಧರ್ಮವನ್ನು ತಿಳಿಸುವುದೂ ಯಜ್ಞಯಾಗಾದಿಗಳನ್ನು ಮಾಡಿಸುವುದೂ ಮಂತ್ರಪೂಜೆಗಳಿಂದ ಪ್ರಜೆಗಳನ್ನು ಕ್ಷಾಮಾದಿ ಉಪದ್ರವಗಳಿಂದ ಪಾರುಮಾಡಿಸುವುದೂ ಪುರೋಹಿತನ ಕೆಲಸ. ಮುಖ್ಯಮಂತ್ರಿಗೆ ಪ್ರತಿನಿಧಿಯೆಂದು ಹೆಸರು. ಅವನಿಗೆ ಆಡಳಿತದ ಸಕಲಶಾಖೆಗಳ ಮೇಲೂ ಪೂರ್ಣ ಅಧಿಕಾರವಿತ್ತು. ಸೈನ್ಯಶಾಖೆಗೆ ಸೇನಾಪತಿ ಮುಖ್ಯನು. ರಾಜನ ಗೃಹಕೃತ್ಯ ಮತ್ತು ಅಂತರಂಗ ಕಾರ್ಯಗಳನ್ನೂ ಅಂತಃಪುರನಿವಾಸಿಗಳ ನಿತ್ಯಜೀವನದ ಮೇಲ್ವಿಚಾರಣೆಯನ್ನೂ ದೌವಾರಿಕ ಮತ್ತು ಅಂತರ್ವಂಶಿಕ ಎಂಬ ಅಧಿಕಾರಿಗಳು ನಿರ್ವಹಿಸುತ್ತಿದ್ದರು.

ಕೋಶ, ಕುಪ್ಯ, ಕೋಷ್ಠ, ಆಯುಧ ಮತ್ತು ಬಂಧನಶಾಖೆಗಳಿಗಾಗಿ ಕಟ್ಟಡಗಳನ್ನು ಕಟ್ಟಿಸುವುದು ಮತ್ತು ಯುಕ್ತ, ಉಪಯುಕ್ತ ಮತ್ತು ತತ್ಪುರುಷರೇ ಮೊದಲಾದ ನೌಕರರ ಮೇಲ್ವಿಚಾರಣೆ ನೋಡುವುದು ಸನ್ನಿಧಾತನ ಕೆಲಸ. ಭೂಮಿಯ ಅಳತೆ, ಸರ್ಕಾರಕ್ಕೆ ಸಲ್ಲತಕ್ಕ ನಾನಾಬಗೆಯ ಕರಗಳನ್ನು ನೇರವಾಗಿ ತಾನೇ ಅಥವಾ ಇತರ ಶಾಖಾಧಿಕಾರಿಗಳ ಮೂಲಕ ವಸೂಲುಮಾಡುವುದೂ ಜಮಾಖರ್ಚುಗಳನ್ನು ಪರಿಶೀಲಿಸುವುದೂ ಸಮಾಹರ್ತನ ಕೆಲಸ. ಕಂಟಕಶೋಧನ ಮತ್ತು ನ್ಯಾಯಾನ್ಯಾಯಗಳ ಪರಿಶೀಲನಕಾರ್ಯವೂ ಅವನಿಗೇ ಸೇರಿದ್ದವು.

ಕೋಶ, ಪೌತವ, ಮಾನ, ಕೋಷ್ಠ, ಕುಪ್ಯ, ಆಯುಧ, ಬಂಧನಶಾಖೆಗಳ ಅಧ್ಯಕ್ಷರೆಲ್ಲರೂ ಇವನ ಅಧೀನರು. ಖನಿ, ಸೇತು, ವನಗಳಿಂದ ಸುಂಕ ವಸೂಲಿಯು ಶುಲ್ಕಾಧ್ಯಕ್ಷನಿಗೆ ಸೇರಿದ್ದಿತು. ಲೋಹ, ನಾಣ್ಯ, ಆಭರಣ ಮತ್ತು ಹವಳಾದಿಗಳ ಮಾರಾಟದ ಮೇಲ್ವಿಚಾರಣೆಯು ಲೋಹ, ಲಕ್ಷಣ, ಸುವರ್ಣ, ಖನ್ಯಧ್ಯಕ್ಷರುಗಳಿಂದ ನೋಡಲ್ಪಡುತ್ತಿದ್ದಿತು. ಒಕ್ಕಲತನ, ಪಶು ಪಕ್ಷಿಗಳ ರಕ್ಷಣೆ, ಪುಂಡರನ್ನು ಹತೋಟಿಯಲ್ಲಿಡುವುದು, ಯಾತ್ರಿಕರಿಗೆ ಮತ್ತು ಅನ್ಯದೇಶೀಯರಿಗೆ ಪರವಾನೆಗಳನ್ನು ಕೊಡು ವುದು, ನೇಯ್ಗೆ ಶಾಖೆಗಳ ಮೇಲ್ವಿಚಾರಣೆ ಇವುಗಳಿಗೆ ಸಂಬಂಧ ಪಟ್ಟ ಅಧಿಕಾರವನ್ನು ಸಿತಾಧ್ಯಕ್ಷ, ಸೂನಾಧ್ಯಕ್ಷ ಮುದ್ರಾಧ್ಯಕ್ಷ ಮತ್ತು ಸೂತ್ರಾಧ್ಯಕ್ಷರು ನಿರ್ವಹಿಸುತ್ತಿದ್ದರು. ಕಾಲು ದಳ, ಗೋವು, ಅಶ್ವ, ಹಸ್ತಿ, ರಥ ಮತ್ತು ನಾವೆ ಮುಂತಾದ ಶಾಖೆಗಳ ಅಧಿಕಾರವು, ಪತ್ತ್ಯಧ್ಯಕ್ಷ, ವಿವೀತಾಧ್ಯಕ್ಷ, ಹಸ್ತ್ಯಧ್ಯಕ್ಷ, ನಾಗವನಾಧ್ಯಕ್ಷ, ರಥಾಧ್ಯಕ್ಷ ಮತ್ತು ನಾವಾಧ್ಯಕ್ಷ ಇವರುಗಳ ಕೈಲಿದ್ದಿತು.

ಪ್ರತಿ ಅಧ್ಯಕ್ಷನ ಜವಾಬ್ದಾರಿಯೂ ಬಹಳವಾಗಿದ್ದುದರಿಂದ ಆಯಾಸ್ಥಾನಕ್ಕೆ ಯೋಗ್ಯರಾದವರನ್ನೇ ಹುಡುಕಿ ನೇಮಿಸಬೇಕಾಗಿದ್ದಿತು. ಅನೇಕ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರು ಮಾತ್ರ ಆಯಾಸ್ಥಾನಕ್ಕೆ ಯೋಗ್ಯರು. ರಾಜನು ಪುರೋಹಿತ ಮತ್ತು ಮುಖ್ಯಮಂತ್ರಿಗಳ ಸಲಹೆಗಳ ಮೂಲಕ ಧರ್ಮೋಪದ, ಅರ್ಥೋಪದ, ಕಾಮೋಪದ ಮತ್ತು ಭಯೋಪದಗಳೆಂಬ ನಾಲ್ಕು ಪರೀಕ್ಷೆಗಳನ್ನು ನಡೆಯಿಸಿ ಉತ್ತೀರ್ಣರಾದವರನ್ನು ಅವರವರ ಯೋಗ್ಯತಾನುಸಾರ ಆಯಾ ಶಾಖೆಗಳಿಗೆ ನೇಮಿಸುತ್ತಿದ್ದನು. ಅಮಾತ್ಯನಾಗುವವನು ರಾಜ್ಯನಿವಾಸಿಯಾಗಿ ಸತ್ಕುಲ

ಪ್ರಸೂತನಾಗಿಯೂ ಸಮರ್ಥನಾಗಿಯೂ ಇರಬೇಕಾಗಿದ್ದಿತು. ಕಲೆಯಲ್ಲಿ ನಿಪುಣನೂ ದೂರದೃಷ್ಟಿಯುಳ್ಳವನೂ ಸತ್ವಸಂಯುಕ್ತನಾಗಿಯೂ ನಿರ್ಭಯನಾಗಿಯೂ ಸಾಧುವಾಗಿಯೂ ಇರಬೇಕಾಗಿದ್ದಿತು.

ಮೌರ್ಯಸಾಮ್ರಾಟನ ರಾಜಧಾನಿಯೂ ಕೌಟಿಲ್ಯನ ನಿವಾಸಸ್ಥಾನವೂ ಆದ ಪಾಟಲಿಪುತ್ರವು ಭರತಖಂಡದಲ್ಲೆಲ್ಲಾ ಅತಿ ಮುಖ್ಯವಾದ ನಗರವಾಗಿದ್ದಿತು. ನಗರದ ರಕ್ಷಣೆಗಾಗಿ ಆಡಳಿತವನ್ನು ಅನೇಕ ಭಾಗಗಳಾಗಿ ವಿಭಾಗಿಸಿದ್ದರು. ಪ್ರತಿಯೊಂದು ಭಾಗಕ್ಕೂ ಒಬ್ಬೊಬ್ಬ ಅಧ್ಯಕ್ಷನಿದ್ದು ತನ್ನ ಶಾಖೆಯ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸುತ್ತಿದ್ದನು. ಅವರಲ್ಲಿ ಪ್ರದೇಷ್ಟ್ರ, ಪೌರವ, ವ್ಯವಹಾರಿಕ, ದಂಡಪಾಲ, ಸುರಾಧ್ಯಕ್ಷ ಮತ್ತು ಗಣಿಕಾಧ್ಯಕ್ಷರು ಮುಖ್ಯರಾದವರು.

**ರಾಜಾದಾಯ.** ರಾಜಾದಾಯವು ಅನೇಕವಿಧವಾಗಿದ್ದಿತು. ದೇಶವನ್ನು ಕರವಸೂಲಿಗೆ ಅನುಕೂಲವಾಗುವಂತೆ ಐದು ವಿಧವಾಗಿ ವಿಂಗಡಿಸಿದ್ದರು. ಕರವನ್ನು ಕೊಡದೆ ಇರತಕ್ಕ ಗ್ರಾಮಗಳು ಪರಿಹಾರಿಕಗಳು. ತೆರಿಗೆಗೆ ಬದಲಾಗಿ ಸೈನಿಕರನ್ನು ಒದಗಿಸುತ್ತಿದ್ದ ಭಾಗ ಆಯುಧೀಯ. ಇವಲ್ಲದೆ ತೆರಿಗೆಯನ್ನು ಹಿರಣ್ಯರೂಪವಾಗಿಯೋ ಅಥವಾ ದವಸಧಾನ್ಯದ ರೂಪವಾಗಿಯೋ ಒಪ್ಪಿಸುತ್ತಿದ್ದ ಭಾಗಗಳೂ ಇದ್ದವು. ಭೂ ಆದಾಯವಲ್ಲದೆ ಬಲಿ, ಕರ, ವಣಿಕ, ನದಿ ಮತ್ತು ಪಟ್ಟಣಗಳಿಂದಲೂ ರಾಷ್ಟ್ರಾದಾಯವು ಬರುತ್ತಿದ್ದಿತು. ಇತರ ರಾಜಾದಾಯವು ನವರತ್ನಗಳು, ಲೋಹ, ಉಪ್ಪು ಮೊದಲಾದುವುಗಳ ಮಾರಾಟದಿಂದ; ಹೂವು, ಹಣ್ಣು, ತರಕಾರಿ, ಕಬ್ಬು ಮುಂತಾದುವುಗಳ ವ್ಯಾಪಾರದಿಂದ; ಅರಣ್ಯದಲ್ಲಿ ಬೆಳೆದ ವನಸ್ಪ

ತಿಗಳು ಮತ್ತು ಮೃಗಪಕ್ಷಿಗಳ ಮಾರಾಟದಿಂದ; ಕುದುರೆ,ಒಂಟೆ, ಕುರಿ, ಆಡು ಮೊದಲಾದ ಸಾಕಿದ ಪ್ರಾಣಿಗಳ ಮಾರಾಟದಿಂದ; ಮತ್ತು ಭೂಜಲಮಾರ್ಗಗಳ ಮೇಲಿನ ಸುಂಕದಿಂದ ಬರುತ್ತಿದ್ದಿತು. ಅರ್ಥಶಾಸ್ತ್ರದಲ್ಲಿ ಇವುಗಳಲ್ಲದೆ ಇನ್ನೂ ಅನೇಕ ರೀತಿಯ ಆದಾಯಗಳು ವಿವರಿಸಲ್ಪಟ್ಟಿವೆ. ಸುರಾ, ಸೂನಾ, ಸೂತ್ರ, ತೈಲ, ಕ್ಷಾರ ಮತ್ತು ಅಕ್ರ್ಯಾಯಿಗಳಿಂದ ಬಂದ ಸುಂಕಗಳು, ಅಪರಾಧಿಗಳಿಂದ ಬರುತ್ತಿದ್ದ ದಂಡ, ಆದಾಯ ಮತ್ತು ನಿಧಿಗಳ ಮೇಲಿನ ತೆರಿಗೆಗಳು ಇವುಗಳೂ ರಾಜಾದಾಯದಲ್ಲಿ ಸೇರಿದ್ದವು.

ಮೇಲೆ ಹೇಳಿದ ಆದಾಯಗಳು ಕಾಲಕಾಲಕ್ಕೆ ವಸೂಲಾಗುವಂತೆ ನೋಡಿಕೊಳ್ಳುವುದಕ್ಕೂ ಅವುಗಳ ಲೆಕ್ಕವನ್ನು ಸರಿಯಾಗಿಡುವುದಕ್ಕೂ ಅನೇಕ ರೀತಿಯಾದ ಅಧಿಕಾರಿಗಳಿದ್ದರು. ರಾಜ್ಯದ ಆದಾಯ ವೆಚ್ಚಗಳ ಮುಖ್ಯ ಅಧಿಕಾರಿ ಸಮಾಹರ್ತ. ಇವನ ಕೈಕೆಳಗೆ ದ್ರೋಣಮುಖಕ್ಕೆ ಪ್ರದೇಷ್ಟನೂ, ಖಾರ್ವಟಿಕಕ್ಕೆ ಸ್ಥಾನಿಕನೂ, ಸಂಗ್ರಹಣಕ್ಕೆ ಗೋಪನೂ, ಗ್ರಾಮಕ್ಕೆ ಗ್ರಾಮಣಿಯೂ, ಅಧಿಕಾರಿಗಳು. ಗ್ರಾಮಸಂಸ್ಥೆಯು ರಾಜಕೀಯಕ್ಕೆ ನೆಲಕಟ್ಟಾಗಿದ್ದಿತು. ಭೂಮಿಯನ್ನು ಅಳತೆ ಮಾಡುವುದೂ, ತರೀ ಖುಷ್ಕಿ ಭೂಮಿಗಳನ್ನು ಗೊತ್ತುಪಡಿಸುವುದೂ ಮನೆ, ಚಾವಡಿ ಮತ್ತು ದೇವಾಲಯಗಳನ್ನು ಕಟ್ಟುವ ರೀತಿಯನ್ನು ತಿಳಿಸಿ ಅವುಗಳ ಲೆಕ್ಕಪತ್ರವನ್ನು ಇಡುವುದೂ ಗ್ರಾಮಣಿಯ ಕೆಲಸ; ವರ್ತಕ ಶ್ರೇಣಿ, ಪಂಚಾಯಿತಿ ಸಭೆ ವೃದ್ಧಮಂಡಲಿಗಳ ಸಹಾಯದಿಂದ ತಮಗೆ ಸೇರಿದ ಪ್ರದೇಶಗಳ ಸಾಮಾಜಿಕ, ಆರ್ಥಿಕ, ಮತ್ತು ಬಡಬಗ್ಗರ ಸಮಸ್ಯೆಗಳನ್ನು ಪರಿಹರಿಸುವುದು, ಜನನಮರಣಗಳ ಲೆಕ್ಕವನ್ನಿಡುವುದು—ಈ ಕೆಲಸಗಳು ಇತರ ಅಧಿಕಾರಿಗಳಿಗೆ ಸೇರಿದ್ದುವು. ಅಡವು, ವಿಕ್ರಯ, ಕುಟುಂಬಗಳ ಆಯವ್ಯಯದ ಪಟ್ಟಿ,

ಮತ್ತು ಇತರ ಲೆಕ್ಕಪತ್ರಗಳನ್ನಿಡುವುದಕ್ಕಾಗಿ ಗಣನಿಕ, ಸಾಂಖ್ಯಾಯಿಕ, ರೂಪದರ್ಶಕ, ಮೊದಲಾದ ಅಧಿಕಾರಿಗಳು ಸನ್ನಿಧಾತನ ಕೈಕೆಳಗೆ ಕೆಲಸಮಾಡುತ್ತಿದ್ದರು. ಪ್ರತಿ ಅಧಿಕಾರಿಯೂ ತನ್ನ ಲೆಕ್ಕಪತ್ರಗಳನ್ನು ಆಷಾಢಮಾಸದೊಳಗೆ ಸರ್ಕಾರಕ್ಕೆ ಒಪ್ಪಿಸಬೇಕಾಗಿದ್ದಿತು.

**ನ್ಯಾಯಾಡಳಿತ.** ಧರ್ಮಪರಿಪಾಲನೆ ರಾಷ್ಟ್ರದ ಒಂದು ಮುಖ್ಯಧ್ಯೇಯವಾದುದರಿಂದ ಧರ್ಮಕ್ಕೆ ಸಂಬಂಧಪಟ್ಟ ನಡತೆ ಮತ್ತು ಪದ್ಧತಿಗಳನ್ನು ಬಹಳ ದಕ್ಷತೆಯಿಂದ ಕಾಪಾಡಬೇಕಾಗಿದ್ದಿತು. ದೇಶದಲ್ಲಿ ಶಾಂತಿ ಸೌಹಾರ್ದಗಳನ್ನೇರ್ಪಡಿಸಲು ದುಷ್ಟರನ್ನು ಅಡಗಿಸಿ ನ್ಯಾಯವಾದ ವಿಷಯಗಳಿಗೆ ಉತ್ತೇಜನಕೊಡಬೇಕಾಗಿದ್ದಿತು. ಈ ಕೆಲಸವನ್ನು ನಡೆಸುವದೆಂದರೆ, ಅಪರಾಧವು ಯಾವುದು ಮತ್ತು ಅಪರಾಧಿ ಯಾರು ಎಂಬುದರ ನಿರ್ದೇಶ ಅತಿಮುಖ್ಯ. ಇವುಗಳ ನಿರ್ಣಯಕ್ಕಾಗಿ ನ್ಯಾಯಾಂಗವೂ ಸಂಗ್ರಹಣ, ದ್ರೋಣಮುಖ ಮತ್ತು ಸ್ಥಾನೀಯವೇ ಮೊದಲಾದ ಮುಖ್ಯ ಸ್ಥಳಗಳಲ್ಲಿ ನ್ಯಾಯಾಸ್ಥಾನಗಳೂ ಇದ್ದವು. ಕುಲ, ಶ್ರೇಣಿ, ಗಣಗಳೂ ಸಹ ಪಂಚಾಯತಿಗಳನ್ನು ಏರ್ಪಡಿಸಿಕೊಂಡಿದ್ದವು. ನ್ಯಾಯಾಂಗವು ಸಮರ್ಪಕವಾಗಿ ಕೆಲಸಮಾಡುತ್ತಿದ್ದಿತೆಂಬುದಕ್ಕೆ ಬೇಕಾದಷ್ಟಾಗೆ ಆಧಾರಗಳಿವೆ.

ಸಾಲ, ಮಾನಭಂಗ, ಹೊಡೆದಾಟ, ದಾಯವಿಭಾಗ ಮುಂತಾದ ವ್ಯವಹಾರಗಳ ತೀರ್ಮಾನಕ್ಕಾಗಿ "ಧರ್ಮಸ್ಥೀಯ" ಎಂಬ ನ್ಯಾಯಾಸ್ಥಾನಗಳಿದ್ದವು. ಅಧಿಕಾರಿಗಳ ಅಪರಾಧ, ದ್ರೋಹ, ಕಳವು ಮತ್ತು ಉಪನಿಪಾತ ಮೊದಲಾದ ಅಪರಾಧಗಳನ್ನು ಗೊತ್ತುಮಾಡಿ ನಿರ್ಣಯಿಸಿ ಶಿಕ್ಷೆವಿಧಿಸುವುದು ಮತ್ತು ಶಾಸನಗಳ ಅರ್ಥವಿವರಣೆ ಮತ್ತು ಅನ್ವಯ—ಇವೆಲ್ಲವೂ ಕಂಟಕ

ಶೋಧನಸಭೆಗಳ ಕೆಲಸ. ನ್ಯಾಯವಿಚಾರಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದ ಅಮಾತ್ಯರು ನ್ಯಾಯಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ರಾಜನಾಗಲೀ ಧರ್ಮಾಧಿಕಾರಿಯಾಗಲೀ ಕೌಟಿಲ್ಯನ ಕಾಲದಲ್ಲಿ ನ್ಯಾಯಾಸ್ಥಾನದ ಕೆಲಸಗಳನ್ನು ನೆರವೇರಿಸುತ್ತಿರಲಿಲ್ಲ.

ಪೂರ್ವಪಕ್ಷ, ಪ್ರತಿಪಕ್ಷ ಮತ್ತು ಕ್ರಿಯಾನಿರ್ಣಯ ಇವು ಮುಖ್ಯವಾದ ನ್ಯಾಯಕ್ರಮ. ನ್ಯಾಯಸಭೆಯಲ್ಲಿ ತೃಪ್ತಿಕರವಾದ ತೀರ್ಪು ದೊರೆಯದಿದ್ದರೆ ಕಕ್ಷಿ ಪ್ರತಿಕಕ್ಷಿಗಳು ಪಂಡಿತರಿಂದ ಕೂಡಿದ ರಾಜಪ್ರಣಿಧಿಸಭೆಗೆ ಪುನರ್ವಿಮರ್ಶೆಗಾಗಿ ಹೋಗಬಹುದಾಗಿತ್ತು. ಈ ಸಭೆಗೆ ಪ್ರಾಡ್ವಿವಾಕನೇ ಮುಖ್ಯ ನ್ಯಾಯಾಧೀಶನು.

ವ್ಯವಹಾರಕ್ಕೆ ಸಂಬಂಧಪಟ್ಟ ವಿವಾದಗಳೆಲ್ಲವನ್ನೂ ಸ್ಥಳದ ಪ್ರಮುಖರು ನಿರ್ಧರಿಸುತ್ತಿದ್ದರು. ಭೂಮಿಗೆ ಸಂಬಂಧಪಟ್ಟ ವ್ಯವಹಾರಗಳೆಲ್ಲವೂ ಈ ಪ್ರಮುಖರ ಸಮ್ಮುಖದಲ್ಲಿ ಬಹಿರಂಗವಾಗಿ ನಡೆಯಬೇಕಾಗಿದ್ದಿತು. ಭೂಸಂಬಂಧವಾದ ವ್ಯವಹಾರಗಳು ಬಹಳವಾಗಿರಲಿಲ್ಲ. ಕಂದಾಯವನ್ನುಕೊಡುತ್ತಿದ್ದ ಭೂಮಿಯನ್ನು ಕಂದಾಯವನ್ನು ಕೊಡಬೇಕಾಗಿದ್ದ ಜನರಿಗೆ ಬ್ರಹ್ಮಾದಾಯ ಭೂಮಿಗಳನ್ನು ಅಂತಹ ಹಕ್ಕುಳ್ಳವರಿಗೇ ಮಾರಬೇಕಾಗಿದ್ದಿತು. ಇದರಿಂದ ರಾಜಾದಾಯವೇನೂ ಕಡಿಮೆಯಾಗುತ್ತಿರಲಿಲ್ಲ; ಆದರೆ ಹೆಚ್ಚು ವ್ಯವಹಾರಕ್ಕೆ ಮಾರ್ಗವಿರಲಿಲ್ಲ. ಈ ಕಾನೂನು ಎಷ್ಟು ಮಟ್ಟಿಗೆ ಗಡುಸಾಗಿತ್ತೆಂದರೆ, ಕಂದಾಯವನ್ನು ಕೊಡುತ್ತಿದ್ದ ಗ್ರಾಮವಾಸಿಯು ಕಂದಾಯವಿಲ್ಲದ ಭೂಮಿಗೆ ವಾಸಮಾಡಲು ಹೋದರೆ ಶಿಕ್ಷೆಗೆ ಗುರಿಯಾಗುತ್ತಿದ್ದನು.

ಭೋಗ್ಯಸ್ವತ್ತುಗಳ ಮೇಲೆ ಶೇ ೧೫ ಕ್ಕೆ ಜಾಸ್ತಿಯಾಗಿ ಬಡ್ಡಿಯನ್ನು ವಸೂಲು ಮಾಡುವಂತಿರಲಿಲ್ಲ. ಹತ್ತು ವರ್ಷ

ಗಳಾದಮೇಲೆ ಕೊಟ್ಟ ಸಾಲವನ್ನು ಹಿಂದಕ್ಕೆ ಕೇಳಲು ಹಕ್ಕಿರಲಿಲ್ಲ. ತಂದೆ ತಾಯಿಯರು, ದಂಪತಿಗಳು, ಮತ್ತು ಮಕ್ಕಳ ಮೇಲೆ ಋಣವ್ಯಾಜ್ಯವನ್ನು ಹೂಡುವುದಕ್ಕೆ ಅವಕಾಶವಿರಲಿಲ್ಲ; ಭೂಮಿಯು ಹತ್ತುವರ್ಷಕಾಲ ಅನುಭವಕ್ಕೆ ಬಂದಮೇಲೆ ಅನುಭವದಾರನಿಗೆ ಭೂಸ್ವಾಮ್ಯದ ಹಕ್ಕು ದೊರೆಯುತ್ತಿತ್ತು.

ಕಂಟಕ ಶೋಧನೆಯು ಸಮರ್ಪಕವಾಗಿ ನಡೆಯುತ್ತಿದ್ದಿತು. ಕೃತ್ಯ ನಡೆದ ಮೂರು ದಿನಗಳು ಕಳೆದನಂತರ "ಗುಮಾನಿ" ಇದ್ದರೂ ಶಂಕಿತನನ್ನು ಹಿಡಿದು ಶಿಕ್ಷಿಸುವುದಕ್ಕೆ ನ್ಯಾಯದನುಮತಿ ಇರಲಿಲ್ಲ. ಬಲವಾದ ಮತ್ತು ನಂಬಲರ್ಹವಾದ ಕಾರಣಗಳು ಸಿಕ್ಕಿ ಶಂಕಿತನು ತಪ್ಪಿತಸ್ಥನೆಂದು ದೃಢೀಕರಿಸಲ್ಪಟ್ಟಮೇಲೆ ಮಾತ್ರ ದಂಡ ವಿಧಿಸಬಹುದಾಗಿದ್ದಿತು. ಮುದುಕರನ್ನೂ ರೋಗಗ್ರಸ್ತರನ್ನೂ ಹಸಿವು ಬಾಯಾರಿಕೆಗಳಿಂದ ಬಳಲಿದವರನ್ನೂ ಆತ್ಮಕಾಸಿತರನ್ನೂ, ಅಪರಾಧಿಗಳಾಗಿದ್ದರೂ, ಅವರನ್ನು ಶಿಕ್ಷಿಸಕೂಡದು. ಬ್ರಾಹ್ಮಣರಿಗೂ ವೇದಾಂತಿಗಳಿಗೂ ದೇಹ ದಂಡನೆಯ ಶಿಕ್ಷೆ ಇರಲಿಲ್ಲ. ಆದರೆ ಬ್ರಾಹ್ಮಣ ಅಪರಾಧಿಯ ಮುಖದ ಮೇಲೆ ಅವನ ತಪ್ಪನ್ನು ತೋರಿಸುವುದಕ್ಕಾಗಿ ಬರೆಹಾಕಿ ಗ್ರಾಮದ ಜನರೆದುರಿಗೆ ಆತನ ತಪ್ಪನ್ನು ಪ್ರಕಟಿಸಿ ಅವನನ್ನು ದೇಶಭ್ರಷ್ಟನನ್ನಾಗಿ ಮಾಡುವುದು ವಾಡಿಕೆಯಾಗಿತ್ತು.

———

*

*

# ೬. ಸಾಮಾಜಿಕಜೀವನವ್ಯವಸ್ಥೆ

ಕೌಟಿಲ್ಯನ ಕಾಲದಲ್ಲಿ ಜನಜೀವನವು ಸುವ್ಯವಸ್ಥಿತವಾಗಿದ್ದಿತು. ಜೀವನದ ವಿಕಾಸಕ್ಕೂ ಸಮುದಾಯ ಜೀವನದ ಅನ್ಯೋನ್ಯತೆಗೂ ಸೌಭಾಗ್ಯಕ್ಕೂ ಆ ಕಾಲದಲ್ಲಿದ್ದ ಶ್ರೇಣಿ ಅಥವಾ ನಿಗಮ ಸಭೆಗಳೇ ಕಾರಣ. ಶ್ರೇಣಿಗಳು ಪಟ್ಟಣದ ನೈರ್ಮಲ್ಯ ರಕ್ಷಣೆ, ನ್ಯಾಯಪಾಲನೆ, ಜಲವಸತಿ, ದಾನಧರ್ಮ ಮುಂತಾದ ಸಾರ್ವಜನಿಕ ಕೆಲಸಗಳನ್ನು ನೆರವೇರಿಸುತ್ತಿದ್ದವು. ಆ ಕಾಲದ ನಗರವಾಸಿಗಳ ಸೌಶೀಲ್ಯಾದಿಗುಣಗಳನ್ನೂ ವೈಶಿಷ್ಟ್ಯವನ್ನೂ ಸಂಸ್ಕೃತಿಯ ಮಟ್ಟವನ್ನೂ ಇಲ್ಲಿ ಹೆಚ್ಚು ವಿವರಿಸಲು ಸಾಧ್ಯವಿಲ್ಲ. ಮುಖ್ಯವಾಗಿ ಆಕಾಲದ ನಗರನಿರ್ಮಾಣಕ್ರಮ, ಸಾಮಾಜಿಕ ಜೀವನ, ಬೇರೆ ಬೇರೆ ಕಸಬಿನವರ ಮೇಲಿನ ಹತೋಟಿ ಮತ್ತು ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನಗಳ ವಿಚಾರವಾಗಿ ಒಂದೆರಡು ಮಾತುಗಳನ್ನು ಮಾತ್ರ ಹೇಳಲಾಗಿದೆ.

ಕೌಟಿಲ್ಯನ ಕಾಲದಲ್ಲಿ ರಾಜಧಾನಿ, ನಗರ, ಪುರ, ಖೇಡ, ಖರ್ವಟ, ಕುಬ್ಜಕ, ಪಟ್ಟಣವೆಂದು ಏಳುವಿಧವಾದ ನಗರಗಳೂ, ದಂಡಕ, ಸರ್ವತೋಭದ್ರ, ನಂದ್ಯಾವರ್ತ, ಪದ್ಮಕ, ಸ್ವಸ್ತಿಕ, ಪ್ರಸ್ತರ, ಕಾರ್ಮುಕ, ಚತುರ್ಮುಖ ಎಂಬ ಕೋಲು, ಕಮಲ, ಮತ್ತು ಬಿಲ್ಲಿನಾಕಾರಗಳಾದ ಎಂಟುವಿಧ ಗ್ರಾಮಗಳು ಇದ್ದುವು. ಗ್ರಾಮ ಮತ್ತು ನಗರ ರಚನೆ ವಿಹಿತವಾಗಿಯೂ ಸಂರಕ್ಷಣೆಗೆ ಅನುಕೂಲವಾಗಿಯೂ ವ್ಯವಸ್ಥಿತವಾಗಿರಬೇಕಾಗಿತ್ತು. ಮಾರ್ಗಗಳ ಉದ್ದಳತೆ ಎಷ್ಟಿರಬೇಕು, ಮುಖ್ಯಭಾಗಗಳಲ್ಲಿ ಯಾವ ಪ್ರಕಾರವಾದ ಜನವಸತಿಯಿರಬೇಕು, ಮನೆಗೆ ಅಂತರವೆಷ್ಟಿರಬೇಕು, ಕಿಟಕಿಗಳು ಎಷ್ಟು ಎತ್ತರವಿರಬೇಕು ಮುಂತಾದ ವಿಷಯಗಳನ್ನು ಅರ್ಥಶಾಸ್ತ್ರದಲ್ಲಿ ತಿಳಿಸಿದೆ.

ನಗರಸ್ಥಾಪನೆಗೆ ಮುಂಚೆ, ನಗರರಚನೆ, ಶಿಲ್ಪಶಾಸ್ತ್ರ ಮತ್ತು ಚಿತ್ರಕಲೆಯಲ್ಲಿ ಪ್ರವೀಣರಾದ 'ಸ್ಥಪತಿ' ಸೂತ್ರಗ್ರಾಹಿ, ಮತ್ತು ಪೌರ್ದಸಿ ಮುಂತಾದ ಅಧಿಕಾರಿಗಳು ವಿಹಿತವಾದ ಸ್ಥಳವನ್ನು ಗೊತ್ತುಮಾಡಿ, ಛಾಯಾಯಂತ್ರದಿಂದ ಮುಖ್ಯದಿಕ್ಕುಗಳನ್ನು ವಿಂಗಡಿಸಿ, ಯಾಂತ್ರಿಕ ಚೌಕೋನಕ್ಕನುಸಾರವಾಗಿ ಮಾರ್ಗ, ಬೀದಿ, ಮತ್ತು ಕಟ್ಟಡಗಳನ್ನು ಕಟ್ಟುತ್ತಿದ್ದರು. ಶಿಲ್ಪಶಾಸ್ತ್ರಾನುಸಾರವಾಗಿ ನಗರವು ಚಕ್ರಾಕಾರವಾಗಿದ್ದು ಸುತ್ತಲೂ ಬಲವಾದ ಕೋಟೆ ಕಂದಕಗಳಿಂದ ಅಲಂಕೃತವಾಗಿರುತ್ತಿತ್ತು. ಕೋಟೆಯ ಮಹಾದ್ವಾರಗಳ ಮತ್ತು ಗೋಡೆಗಳ ಭದ್ರವಾದ ರಚನೆಯನ್ನೂ, ವಿಸ್ತಾರವಾದ ಕೋಟೆಗಳ ಮಧ್ಯದಲ್ಲಿರುವ ತೋಟವನ್ನೂ ಕಮಲ ಸರೋವರಗಳನ್ನೂ, ವಾಸದ ಮನೆಗಳನ್ನೂ ಕುಮಾರಿದೇವತಾ ಗೃಹವನ್ನೂ, ಕೋಟೆಯಲ್ಲಿ ನಿರಂತರವಾಗಿದ್ದ ಕಾವಲಿನ ಶಿಸ್ತನ್ನೂ ಕೌಟಿಲ್ಯನು ವಿವರಿಸಿದ್ದಾನೆ. ಅರಮನೆ ಸುತ್ತಲು ಕೋಟೆಯಿರುತ್ತಿತ್ತು. ರಾಜಧಾನಿಯ ಮಧ್ಯದಲ್ಲಿ ಅರಮನೆ ಮತ್ತು ಕಚೇರಿಗಳನ್ನು ಕಟ್ಟುತ್ತಿದ್ದರು. ರಾಜಮಾರ್ಗವೂ ಮತ್ತು ದ್ರೋಣಮುಖ, ಸ್ಥಾನೀಯ, ಹುಲ್ಲುಗಾವಲಿಗೆ ಹೋಗುವ ಹೆದ್ದಾರಿಗಳೂ ನಾಲ್ಕು ದಂಡ ಅಥವಾ 24 ಅಡಿ ಅಗಲವಾಗಿಯೂ, ಹಳ್ಳಿಗಳಿಗೂ ಸ್ಮಶಾನಕ್ಕೂ ವ್ಯೂಹಗಳಿಗೂ ಹೋಗುವ ದಾರಿಗಳು 48 ಅಡಿ ಅಗಲವಾಗಿಯೂ ಇರುತ್ತಿದ್ದುವು. ರಾಜಪಥ, ಮಹಾಕಾಲ, ವಾಮನವೆಂಬ ಹೆಸರಿನ ಬೀದಿಗಳೂ ಸಾಮಾನ್ಯ 'ಮಂಗಲವೀಥಿ' ಎಂಬ ಹೆಸರಿನ ಮಾರ್ಗವೂ ಕೋಟೆ ಗೋಡೆಯ ಸುತ್ತ ಒಳಭಾಗದಲ್ಲಿ ಊರನ್ನು ಸುತ್ತಿಕೊಂಡಿದ್ದುವು.

ಪಟ್ಟಣದ ಮಧ್ಯದಲ್ಲಿ ರಾಜನು, ಶತ್ರುಗಳಿಂದಲೂ ರಾಜದ್ರೋಹಿಗಳಿಂದಲೂ ಸಹಾಧ್ಯಾಯಿಗಳ ಮೋಸದಿಂದಲೂ ತಪ್ಪಿಸಿ.

ಕೊಳ್ಳುವುದಕ್ಕಾಗಿ ದುರ್ಭೇದ್ಯವಾದ ಮತ್ತು ಅನೇಕ ಗುಪ್ತಮಾರ್ಗಗಳಿಂದಲೂ ಸುರಂಗಗಳಿಂದಲೂ ಕೂಡಿದ ಅರಮನೆ, ಅಂತಃಪುರ ಮತ್ತು ಮೋಹನಗೃಹವೆಂಬ ತನ್ನ ನಿವಾಸಸ್ಥಾನಗಳನ್ನು ಕಟ್ಟಿಕೊಳ್ಳುತ್ತಿದ್ದನು. ಅರಮನೆ ಬೈಲಿನ ನಡುವೆ ರಾಜಸಭಾಗೃಹವಿದ್ದು ಅದರ ಸುತ್ತಲೂ ಮಂತ್ರಿಧರರ ವಾಸದ ಮನೆಗಳೂ, ಯೋಗಶಾಲೆಗಳೂ, ಗೋಅಶ್ವಹಸ್ತಿಗಳ ಶಾಲೆಗಳೂ ಕೋಶಾಗಾರಗಳೂ ಇರುತ್ತಿದ್ದವು. ಪಟ್ಟಣದ ಪಶ್ಚಿಮಕ್ಕೆ ರಥ ಮತ್ತು ಒಂಟೆಯ ಶಾಲೆಗಳು, ಶಿಲ್ಪಿಗಳ ಮತ್ತು ಕೂಲಿಗಾರರ ವಸತಿಗಳು; ಉತ್ತರಕ್ಕೆ ಅಂಗಡಿಗಳು, ಆಸ್ಪತ್ರೆಗಳು, ಬ್ರಾಹ್ಮಣವಸತಿಗಳು; ಪೂರ್ವದಿಕ್ಕಿನಲ್ಲಿ ಕ್ಷತ್ರಿಯರ, ವರ್ತಕರ, ಪರಿಮಳ ದ್ರವ್ಯ ವ್ಯಾಪಾರಿಗಳ ಮನೆಗಳು; ದಕ್ಷಿಣದಲ್ಲಿ ಪಟ್ಟಣಾಧ್ಯಕ್ಷರ, ಸೇನಾನಾಯಕರ, ಸಂಗೀತಗಾರರ, ರೂಪದಾಸಿಯರ ವಸತಿಗಳಿರುತ್ತಿದ್ದವು. ಪಟ್ಟಣದ ಮಧ್ಯಭಾಗದಲ್ಲಿ ಅಪರಾಜಿತ, ಅಪ್ರತಿಹತ, ಜಯಂತ, ವೈಜಯಂತ, ಶಿವ ವೈಶ್ರವಣ, ಅಶ್ವಿನೀದೇವತೆಗಳ ಪೂಜೆಗಾಗಿ ದೇವಾಲಯಗಳನ್ನು ಕಟ್ಟುತ್ತಿದ್ದರು. ದೇವಮಂದಿರದ ಹತ್ತಿರವೆ ಮದಿರಾದೇವಿಯ ದೇವಾಲಯವಿತ್ತು. ಪಟ್ಟಣದ ನಾಲ್ಕುಮೂಲೆಗಳಲ್ಲಿಯೂ ಕ್ಷಾತ್ರದೇವತೆಗಳ ಆಲಯಗಳು, ಮತ್ತು ಧರ್ಮಶಾಲೆಗಳೂ ಇರುತ್ತಿದ್ದವು.

ಆಯಾ ವರ್ಣದವರ ಯೋಗ್ಯತೆಯ ಮೇರೆಗೆ ಅವರ ಮನೆಗಳಿಗೆ ಅಂತಸ್ತುಗಳಿರುತ್ತಿದ್ದವು. ಆದಷ್ಟುಮಟ್ಟಿಗೆ ಒಂದುಬೀದಿಯ ಮನೆಗಳು ಅಂತಸ್ತುಗಳಲ್ಲಿಯೂ ಎತ್ತರದಲ್ಲಿಯೂ ಸಮಾನವಾಗಿಯೂ, ಮನೆಗಳ ಹಿತ್ತಲು, ನಡುವಿನ ಬಾಗಿಲುಗಳು ಒಂದೇ ಸಾಲಿನಲ್ಲಿಯೂ ಎರಡು ಪಾರ್ಶ್ವಗಳಲ್ಲಿ ಕಟ್ಟೆಗಳುಳ್ಳವಾಗಿಯೂ ಇರಬೇಕಾಗಿತ್ತು. ಹತ್ತು ಮನೆಗಳಿಗೆ ಒಂದು ಭಾವಿ

ಅಲ್ಲಿ ನೀರು ಮತ್ತು ಇತರ ಸೌಕರ್ಯಗಳ ವ್ಯವಸ್ಥೆಯು ನೆಟ್ಟಗಿತ್ತು.

**ಮದಿರಾಗೃಹಗಳು.** ರಾಜಧಾನಿಯಲ್ಲಿ ಮದ್ಯಪಾನ ಬಹು ಸಾಮಾನ್ಯವಾಗಿ ಇದ್ದಹಾಗೆ ಕಾಣುತ್ತದೆ. ಪುರಮಧ್ಯದಲ್ಲಿ ಕಟ್ಟಿದ ಮದಿರಾಗೃಹಗಳಲ್ಲಿ ದ್ರಾಕ್ಷಾರಸ ವ್ಯಾಪಾರ ವಿಶೇಷವಾಗಿ ನಡೆಯುತ್ತಿತ್ತು. ಮದಿರೆಯನ್ನು ಉತ್ತಮ ಕುಲದವರಿಗೂ ಶ್ರೀಮಂತರಿಗೂ ಮಾರಬೇಕಾಗಿತ್ತು. ಸುರೆಯನ್ನು ಮದಿರಾಗೃಹದಿಂದ ಹೊರಗೆ ತೆಗೆದುಕೊಂಡು ಹೋಗಕೂಡದೆಂದು ನಿರ್ಬಂಧವಿತ್ತು. ಹಾಗೆ ನಿಬಂಧನೆಯನ್ನು ಉಲ್ಲಂಘಿಸಿದರೆ ಕಠಿಣವಾದ ದಂಡವನ್ನು ಕೊಡಬೇಕಾಗಿತ್ತು.

ಮದಿರಾಗೃಹಗಳು ಹೂಬಳ್ಳಿಗಳಿಂದ ಶೋಭಿಸುವ ತೋಟಗಳಿಂದಲೂ, ಸ್ಫಟಿಕ ಮಂದಿರಗಳಿಂದಲೂ, ವಿಹಾರಸ್ಥಾನಗಳಿಂದಲೂ, ಪರಿಮಳ ಕುಸುಮಮಾಲೆಗಳಿಂದ ಅಲಂಕೃತವಾದ ಶಯ್ಯಾಗೃಹಗಳಿಂದಲೂ ಭೋಗವಸ್ತುಗಳಿಂದಲೂ ಕೂಡಿದ್ದವು. ಮದಿರೆಯನ್ನು ಕುಡಿಯುವ ಮಂದಿರವು ಗಾಯಕರಿಂದಲೂ ಗಣಿಕೆಯರಿಂದಲೂ ನರ್ತಕಿಯರಿಂದಲೂ ಶೋಭಾಯಮಾನವಾಗಿತ್ತು.

ಮದಿರಾಗೃಹಗಳಲ್ಲಿ ಅಧಿಕಾರಿಗಳು ಮೇದಕ, ಪ್ರಸನ್ನ, ಆಸವ, ಅರಿಷ್ಟ, ಮೈರೇಯ ಮತ್ತು ಮಧು ಎಂಬ ಅನೇಕ ವಿಧವಾದ ದ್ರಾಕ್ಷಾರಸಗಳನ್ನು ತಯಾರು ಮಾಡಿ ಸೇವನೆಗಾಗಿ ಬಂದ ವಿಟಜನರಿಗೆ ಮಾರುತ್ತಿದ್ದರು. ಸುರಾಧ್ಯಕ್ಷನಿಗೆ ಮದಿರಾಗೃಹದ ಆಡಳಿತ ಜವಾಬ್ದಾರಿಯು ಗುರುತರವಾಗಿತ್ತು; ಮದಿರೆಯ ಸೇವನೆಗಾಗಿ ಬರುವ ಜನರು ಸ್ಥಳೀಯರೇ ಅಥವಾ ಅನ್ಯದೇಶೀಯರೆ ಎಂದು ತಿಳಿಯು

ವುದು ಕಷ್ಟವಾಗಿತ್ತು. ಗೂಢಚಾರರು ಶತ್ರುರಾಷ್ಟ್ರಗಳಿಂದ ಬಂದು ಪಟ್ಟಣ ಪ್ರವೇಶಿಸಿ, ಮದಿರಾಗೃಹಗಳಲ್ಲಿ ರಾಜಧಾನಿಯ ವ್ಯೂಹರಕ್ಷಣೆಗಳ ರಹಸ್ಯವನ್ನು ತಿಳಿದುಕೊಳ್ಳಬಹುದಾಗಿತ್ತು. ಈ ವಿಪತ್ತುಗಳನ್ನು ನಿವಾರಿಸುವುದಕ್ಕೋಸ್ಕರ ಮದಿರಾಗೃಹದ ಸುಂದರಿಯರು ಸ್ಥಳೀಯ ಮತ್ತು ಪರದೇಶದ ಜನರಿಗೆ ಸುರಾಪಾನ ಮಾಡಿಸಿ ಹಾವಭಾವಗಳನ್ನು ಬೀರಿ, ಅವರು ಉನ್ಮಾದಾವಸ್ಥೆಯಲ್ಲಿದ್ದಾಗ ಅವರ ರಹಸ್ಯಗಳನ್ನು ಭೇದಿಸುತ್ತಿದ್ದರು. ಕೆಲವುವೇಳೆ ಗಣಿಕೆಯರು ಸುರಾಪಾನದಿಂದ ಮದೋನ್ಮತ್ತರಾದವರ ಹಾಗೆ ನಟಿಸಿ ಅನ್ಯದೇಶೀಯರ ವೃತ್ತಾಂತವನ್ನು ತಿಳಿಯುತ್ತಿದ್ದರು.

ಹಬ್ಬ, ಜಾತ್ರೆ, ಸಮಾರಂಭಗಳಲ್ಲಿ ಕುಟುಂಬಿಗಳು ಕೂಡ ಶ್ವೇತಸುರೆಯನ್ನು ತಯಾರು ಮಾಡಿ ಸೇವಿಸಬಹುದಾಗಿತ್ತು. ಆದರೆ ಸಾಧಾರಣ ದಿವಸಗಳಲ್ಲಿ ಮದಿರಾಸೇವನೆಯ ಹಕ್ಕು ಕೆಲವರಿಗೆ ಮಾತ್ರವಿತ್ತು. ಸೇವನೆಯಲ್ಲಿ ಅಭಿರುಚಿಯಿದ್ದವರು ಮದಿರಾಗೃಹಕ್ಕೇ ಹೋಗಿ ಅಲ್ಲಿ ಸೇವಿಸಬೇಕಾಗಿತ್ತು. ಸುರಾಧ್ಯಕ್ಷನು ನಿತ್ಯವೂ ಸರ್ಕಾರದ ಮತ್ತು ವರ್ತಕರ ಮದಿರಾ ವ್ಯಾಪಾರದ ಲೆಖ್ಖವನ್ನು ತಿಳಿದು ಮಾರಾಟದಿಂದ ವಸೂಲಿಯಾದ ಸುಂಕ ಮತ್ತು ವೈಧರಣವನ್ನು ರಾಜನಿಗೆ ಒಪ್ಪಿಸುತ್ತಿದ್ದನು.

**ಸೂನಾಗೃಹಗಳು.** ಸುರಾಕ್ರಯ ವಿಕ್ರಯಗಳ ವಿಚಾರದಲ್ಲಿ ಎಷ್ಟು ನಿಬಂಧನೆಗಳಿದ್ದವೋ ಅಷ್ಟೇ ಮಾಂಸ ಕ್ರಯ ವಿಕ್ರಯಗಳಲ್ಲಿಯೂ ಬಹಳ ಸಮರ್ಪಕವಾದ ಏರ್ಪಾಡಿತ್ತು. ಅಭಯಾರಣ್ಯದಲ್ಲಿ ವಾಸಿಸುವ ಮೃಗಪಶುಗಳ ಹತ್ಯ ನಡೆಯಿಸಿದರೆ ವಿಶೇಷ ಶಿಕ್ಷೆ ಅನುಭವಿಸಬೇಕಾಗಿತ್ತು. ಕುದುರೆ, ಆನೆ, ಗೂಳಿ, ಕ್ರೌಂಚ, ಹಂಸ, ಚಕ್ರವಾಕ, ಭೃಂಗರಾಜ, ಚಕೋರ,

ಕೋಕಿಲ, ನವಿಲು, ಗಿಣಿ ಮತ್ತು ಮದನಸಾರಿಕೆಗಳ ಮಾಂಸವು ನಿಷಿದ್ಧವಾಗಿತ್ತು. ಪರಿಸೂನದಲ್ಲಿಯೇ ಆಗತಾನೆ ಕಡಿದ ಮೃಗಪಶುಗಳ ಹೊಸ ಮಾಂಸವನ್ನು ಮಾರಬೇಕಾಗಿತ್ತು. ಪರಿಸೂನದಿಂದ ಹೊರಗೆ ಮಾರಿದರೆ, ಮೂಳೆಯಿಂದ ಕೂಡಿದ್ದ ಮಾಂಸವನ್ನು ವಿಕ್ರಯಮಾಡಿದರೆ, ತೂಕದಲ್ಲಿ ವ್ಯತ್ಯಾಸವಾದರೆ ಸೂನಾಧ್ಯಕ್ಷನಿಗೆ ಪ್ರತಿಪಾಕವನ್ನು ಕೊಡಬೇಕಾಗಿತ್ತು.

**ಗಣಿಕೆಯರು**—ಇವರು ವಿಶೇಷ ಸಂಖ್ಯೆಯಲ್ಲಿ ಪಟ್ಟಣದ ಮುಖ್ಯ ಭಾಗಗಳಲ್ಲಿಯೂ ಅರಮನೆ ಅಂತಃಪುರಗಳಲ್ಲಿಯೂ ವಾಸಿಸುತ್ತಿದ್ದರು. ವೇಶ್ಯಾವೃತ್ತಿಯು ಕೌಟಿಲ್ಯನ ಕಾಲದಲ್ಲಿ ಅಷ್ಟು ದೂಷ್ಯವಾಗಿದ್ದ ಹಾಗೆ ಕಾಣುವುದಿಲ್ಲ. ನರ್ತನ, ಭೋಗ ವಿಷಯಗಳಲ್ಲಿಯೂ, ರಾಜನ ಅಂತಃಪುರ ರಕ್ಷಣೆಗೂ ಅಂತಃಪುರದ ಒಳಸಂಚುಗಳಲ್ಲಿಯೂ ಪರರಾಷ್ಟ್ರಗಳೊಡನೆ ಸಂಧಿಸಂಧಾನಗಳಲ್ಲಿಯೂ ಗಣಿಕೆಯರು ಬಹಳ ಉಪಯೋಗಕಾರಿಗಳಾಗಿದ್ದರು.

ನರ್ತಕಿಯರು ಎಂಟನೆ ವರ್ಷದಿಂದಲೇ ನೃತ್ಯಕಲಾಭ್ಯಾಸ ಮಾಡಿ ರಾಜನ ಮುಂದೆ ಅಭಿನಯಿಸಬೇಕಾಗಿತ್ತು ಯೌವನ ಸೌಂದರ್ಯದಿಂದ ಕೂಡಿದ ಗಣಿಕೆಯು ನೃತ್ಯ, ನಾಟ್ಯ, ಲಾಸ್ಯ ತಾಂಡವ ಮುಂತಾದುವುಗಳಲ್ಲಿ ಪ್ರವೀಣತೆಯನ್ನು ಹೊಂದಿರಬೇಕಾಗಿತ್ತು. ಪೂರ್ವಿಕರಲ್ಲಿ ಕಲಾಭಿರುಚಿಯು ನಾನಾ ವಿಧವಾಗಿತ್ತೆಂಬುದಕ್ಕೂ ಕಲೆಗಳೆಲ್ಲಾ ಪುಷ್ಟಿಯನ್ನೂ ತೇಜಸ್ಸನ್ನೂ ಪಡೆದಿದ್ದವೆಂಬುದಕ್ಕೂ ಅರ್ಥಶಾಸ್ತ್ರದಲ್ಲಿ ಸಾಕಾದಷ್ಟು ನಿದರ್ಶನ ಸಿಕ್ಕುತ್ತವೆ. ಗಣಿಕಾಧ್ಯಕ್ಷನು ರೂಪದಾಸಿಯ ಆಯವ್ಯಯ, ಚಲನವಲನಗಳಮೇಲ್ವಿಚಾರಣೆಯನ್ನು ಆಗಿಂದಾಗ್ಗೆ ನಡೆಸಬೇಕು; ಹಿತಕರವಾದ ಜೀವನಕ್ಕೆ ಸಮರ್ಪಕವಾದ ವ್ಯವಸ್ಥೆಗಳನ್ನು

ಮಾಡಬೇಕು ; ರೂಪದಾಸಿಯರಿಗೆ ವಿಟಪುರುಷರಿಂದ ಅಪಾಯ ಸಂಭವಿಸಿದ ಸಂದರ್ಭದಲ್ಲಿ ಪುರುಷರಿಂದ ರೂಪದಾಸಿಯರಿಗೆ ನಿಷ್ಕ್ರಯ ಮತ್ತು ದಂಡವನ್ನು ಕೊಡಿಸಬೇಕು. ಪ್ರಾಪ್ತವಯಸ್ಕಳಲ್ಲದ ಕುಮಾರಿಯೊಡನೆ ಪುರುಷನು ಸಂಬಂಧವನ್ನು ಬಯಸಿದರೆ ಅಥವಾ ರೂಪದಾಸಿಯರನ್ನು ಬಲಾತ್ಕಾರಪಡಿಸಿದರೆ ಪುರುಷನನ್ನು ಕಠಿಣವಾಗಿ ಶಿಕ್ಷಿಸಬೇಕೆಂದು ಕೌಟಿಲ್ಯನ ಹೇಳಿಕೆ. ರೂಪಜೀವಿಗಳು ಪ್ರತಿ ತಿಂಗಳಲ್ಲಿಯೂ ತಮ್ಮ ಒಂದು ದಿನದ ಸಂಪಾದನೆಯ ಎರಡರಷ್ಟನ್ನು (" ಭೋಗದ್ವಿಗುಣಂ ") ಸರ್ಕಾರಕ್ಕೆ ಕೊಡಬೇಕಾಗಿತ್ತು. ಪ್ರೇಕ್ಷಾವೇತನ, ವಿಟಪುರುಷರು ಕೊಡಬೇಕಾಗಿದ್ದ ದಂಡಗಳು, ಗಾಯಕರು, ವಾಗ್ಜೀವಿಗಳು, ಕುಶೀಲವರು, ಪ್ಲವಕರು, ಸೌಭಿಕರು, ಚಾರಣರು, ಗಣಿಕೆಯರು—ಇವರೆಲ್ಲರೂ ಪ್ರತಿ ತಿಂಗಳಲ್ಲಿ ಕೊಡುತ್ತಿದ್ದ ಸುಂಕಗಳು ಸರ್ಕಾರದ ಆದಾಯದ ಒಂದು ಮುಖ್ಯಾಂಶವಾಗಿತ್ತು.

**ಕಸುಬುಗಳು.**—ಜೀವನೋದ್ಯೋಗಗಳಲ್ಲಿ ಕೃಷಿ ಕೈಗಾರಿಕೆ ವ್ಯಾಪಾರ ಮತ್ತು ಸೇವಾರೂಪವಾದ ವೃತ್ತಿಗಳೇ ಮುಖ್ಯ. ದೇಶದಲ್ಲಿ ಕೃಷಿಯೇ ಪ್ರಧಾನವಾಗಿದ್ದಾಗ್ಯೂ ಕೃಷಿಯ ಜೊತೆಗೆ ಅನೇಕ ಉದ್ಯೋಗ ಕೈಗಾರಿಕೆಗಳೂ ಉತ್ಕರ್ಷವಾಗಿ ರಾಷ್ಟ್ರರಂಜಕವಾಗಿದ್ದವು. ಕೈಗಾರಿಕೆಗಳಲ್ಲಿಯೂ, ಕುಶಲ ಕಲೆಗಳಲ್ಲಿಯೂ, ಕಬ್ಬಿಣ, ಚಿನ್ನ, ಬೆಳ್ಳಿ ಕೆಲಸಗಳಲ್ಲಿಯೂ, ಲೋಹ, ಮರ, ಚರ್ಮ ಸಾಮಾನುಗಳ ನಿರ್ಮಾಣದಲ್ಲಿಯೂ, ನೆಯ್ಗೆ ಮತ್ತು ಬಣ್ಣ ವೃತ್ತಿಗಳಲ್ಲಿಯೂ ಇಡಿ ಜಗತ್ತಿಗೆ ಕೌಟಿಲ್ಯನ ರಾಷ್ಟ್ರವು ತೌರುಮನೆಯಾಗಿತ್ತು. ಅಲಂಕಾರವಾಸನಾದ್ರವ್ಯಗಳನ್ನೂ ಭೋಗವಸ್ತುಗಳನ್ನೂ ಸೃಷ್ಟಿಸುವುದರಲ್ಲಿ ಜನರು ಪ್ರವೀಣತೆಯನ್ನು ಹೊಂದಿದ್ದರು. ವಾದ್ಯಗಳ ರಚನೆಯ

ಲ್ಲಿಯೂ ವಾಸ್ತುಶಿಲ್ಪ ಮುಂತಾದ ಲಲಿತಕಲೆಗಳಲ್ಲಿಯೂ ವೈಶಿಷ್ಟ್ಯವಿತ್ತು. ಹತ್ತಿಬಟ್ಟೆಗಳು, ಆಭರಣ ಮತ್ತು ಅಲಂಕಾರ ಪದಾರ್ಥಗಳು ವಿಶೇಷವಾಗಿ ರಾಷ್ಟ್ರದಲ್ಲಿ ಉತ್ಪತ್ತಿಯಾಗಿ ಅನ್ಯ ದೇಶಗಳಿಗೆ ಕೂಡ ಹೋಗುತ್ತಿದ್ದವು. ಇದರಿಂದ ವ್ಯಾಪಾರ ವಿಸ್ತಾರವಾಯಿತು. ವ್ಯಾಪಾರ ವೃದ್ಧಿಯಾದುದರಿಂದ ಸಮುದ್ರ ಯಾನ ನೌಕನಿರ್ಮಾಣ, ಜೀವನಸಮೃದ್ಧಿ, ಮತ್ತು ವಿಕಾ ಸಕ್ಕೆ ಉತ್ತೇಜನ ಕೊಟ್ಟಿತು. ವ್ಯಾಪಾರದಿಂದ ಗಳಿಸಿದ ಐಶ್ವರ್ಯರಾಶಿಯು ಭೋಗವಿನಿಯೋಗಕ್ಕೂ ಕಲೆಗಳ ಪ್ರೋತ್ಸಾ ಹಕ್ಕೂ ರಾಷ್ಟ್ರಭದ್ರತೆಗೆ ಬೇಕಾಗುವ ಸಲಕರಣೆಗಳನ್ನು ಒದಗಿಸು ಕೊಳ್ಳುವುದಕ್ಕೂ ಸೈನ್ಯಶಿಸ್ತಿಗೂ ಉಪಯೋಗವಾಯಿತು.

ಕೃಷಿಯಂತೆಯೇ ವ್ಯಾಪಾರ ಕೈಗಾರಿಕೆಗಳೂ ರಾಷ್ಟ್ರೋನ್ನತಿಗೆ ಮೂಲವಾದುದರಿಂದ ಅವುಗಳ ರಚನೆ ಮತ್ತು ಆಡಳಿತಗಳು ನಿಯಮಬದ್ಧವಾಗಿರಬೇಕಾಗಿತ್ತು. ಸುವರ್ಣಾಧ್ಯಕ್ಷ, ಪಣ್ಯಾ ಧ್ಯಕ್ಷ, ಸೂತ್ರಾಧ್ಯಕ್ಷ, ನಾವಾಧ್ಯಕ್ಷ ಮೊದಲಾದ ಅಧಿಕಾ ರಿಗಳು ಆಡಳಿತವನ್ನು ನಿರ್ವಹಿಸುತ್ತಿದ್ದರು. ಇವರ ಕರ್ತ ವ್ಯಗಳನ್ನೂ ಕೈಗಾರಿಕೆ ವ್ಯಾಪಾರಗಳಿಗೆ ಸಂಬಂಧಪಟ್ಟ ನಿಯಮ ನಿಬಂಧನೆಗಳನ್ನೂ ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಅನೇಕ ಪ್ರಕ ರಣಗಳಲ್ಲಿ ವಿವರಿಸಿದ್ದಾನೆ. ಒಂದೆರಡು ಕಸಬುಗಳ ವಿಷಯ ವನ್ನು ಇಲ್ಲಿ ಉಲ್ಲೇಖಿಸಿದೆ.

ಕೌಟಿಲ್ಯನ ಕಾಲದಲ್ಲಿ ಜನರು ಹತ್ತಿ ರೇಷ್ಮೆ ಮತ್ತು ತುಬಟೆ ಗಳಿಂದ ವಸ್ತ್ರಗಳನ್ನು ತಯಾರುಮಾಡುತ್ತಿದ್ದರು. ಸೂತ್ರಾ ಧ್ಯಕ್ಷನು ಸೂತ್ರ, ವರ್ಮ, ವಸ್ತ್ರ ಮತ್ತು ರಜ್ಜುಗಳನ್ನು ತಯಾರುಮಾಡುವುದಕ್ಕೆ ಮುಖ್ಯವಾಗಿ ಹೆಂಗಸರನ್ನೇ ನೇಮಿಸು ತ್ತಿದ್ದನು. ವಿಧವೆಯರು, ಅಂಗಹೀನರು, ವೃದ್ಧರಾಜದಾಸಿ

ಯರು, ರೂಪದಾಸಿಯರು, ದಂಡವನ್ನು ತೆರಲಾರದವರು ಉಣ್ಣೆ, ಹತ್ತಿ, ನಾರು ಮುಂತಾದುವುಗಳಿಂದ ನೂಲನ್ನು ಮಾಡುತ್ತಿದ್ದರು. ಮನೆಯಿಂದ ಹೊರಕ್ಕೆ ಬರಲಾಗದ ಹೆಂಗಸರು ಮಾಡಿದ ಸೂತ್ರ ಮತ್ತು ವಸ್ತ್ರಗಳನ್ನು ಸೂತ್ರಾಧ್ಯಕ್ಷನ ದಾಸಿಯರು ಅವರ ಮನೆಗಳಿಗೆ ಹೋಗಿ ಕೊಂಡುಕೊಂಡು ಬರುತ್ತಿದ್ದರು. ಇತರರು ನೂಲನ್ನೂ ಮತ್ತು ವಸ್ತ್ರಗಳನ್ನೂ ಸೂತ್ರಶಾಲೆಯಲ್ಲಿ ಮಾರಬಹುದಾಗಿತ್ತು. ವಸ್ತ್ರಗಳನ್ನು ಮಾಡುವುದಕ್ಕೆ ಉತ್ತಮದರ್ಜೆಯ ನೂಲುಗಳನ್ನು ಅಲ್ಲಿ ಕೊಳ್ಳಬಹುದಾಗಿತ್ತು ; ಕೊಳ್ಳುವುದಕ್ಕೆ ಸರ್ಕಾರವಾಗಲಿ ಅಥವಾ ಶ್ರೇಣಿಗಳಾಗಲಿ ಕೆಲಸಗಾರರಿಗೆ ತಮ್ಮ ನಿಧಿಗಳಿಂದ ದುಡ್ಡನ್ನು ಸಾಲರೂಪವಾಗಿ ಒದಗಿಸುತ್ತಿದ್ದವು. ತನ್ನ ಹೊಟ್ಟೆಯನ್ನು ತನ್ನ ಕುಶಲತೆಯಿಂದಲೇ ಹೊರೆದುಕೊಳ್ಳುವ ಸ್ವವಿತ್ತಕಾರನಿಗೆ ಹೆಚ್ಚು ಮನ್ನಣೆಯಿತ್ತು. ಉತ್ತಮ ನೂಲಿನ ಬದಲು ಕೀಳುನೂಲನ್ನು ಉತ್ತಮ ವಸ್ತ್ರನಿರ್ಮಾಣಕ್ಕಾಗಿ ಉಪಯೋಗಿಸಕೂಡದಾಗಿತ್ತು. ನೂಲನ್ನು ಕದ್ದರೆ ನೇಯ್ಗೆಯಲ್ಲಿ ಮೋಸಮಾಡಿದರೆ ಅಥವಾ ಕೆಲಸದಲ್ಲಿ ಉದಾಸೀನನಾದರೆ ದಂಡತೆರಬೇಕಾಗಿತ್ತು. ಆದರೆ ವಸ್ತ್ರಗಳನ್ನು ನೈಪುಣ್ಯದಿಂದಲೂ ದಕ್ಷತೆಯಿಂದಲೂ ಸಕಾಲಕ್ಕೆ ಸಿದ್ಧಪಡಿಸಿಕೊಟ್ಟರೆ ವೇತನದ ಜೊತೆಗೆ ದ್ರವ್ಯ, ಪುಷ್ಪ, ಸುಗಂಧಗಳು ಪಾರಿತೋಷಕವಾಗಿ ದೊರೆಯುತ್ತಿತ್ತು.

ಬಹಳ ಬೆಲೆಬಾಳುವ ಮತ್ತು ಉತ್ಕೃಷ್ಟವಾದ ವಸ್ತ್ರಗಳನ್ನು ನಿರ್ಮಾಣಮಾಡುತ್ತಿದ್ದರಿಂದ ಅಗಸರು ಬಹಳ ಜಾಗರೂಕತೆಯಿಂದಿರಬೇಕಾಗಿತ್ತು. ನುಣಪಾದ ಕಲ್ಲಿನ ಮೇಲೆ ಅಥವಾ ಹಲಗೆಯ ಮೇಲೆ ಬಟ್ಟೆಗಳನ್ನು ಒಗೆಯಬೇಕು. ಅಗಸರು ಕುಡುಗೋಲು ಗುರುತಿನ ಬಟ್ಟೆಗಳನ್ನೇ ಧರಿಸಬೇಕೆಂಬ ನಿಯಮ

ವಿದ್ದಿತು ಇತರರ ಬಟ್ಟೆಗಳನ್ನು ಧರಿಸಿದರೆ, ಹರಿದರೆ, ಬಣ್ಣ ಹೋಗಿಸಿದರೆ, ಬಾಡಿಗೆಗೆ ಕೊಟ್ಟರೆ, ವಿಕ್ರಯ ಅಥವಾ ದಾನವಮಾಡಿದರೆ ವಿಶೇಷ ದಂಡ ತೆರಬೇಕಾಗಿತ್ತು. 5 ಅಥವಾ 7 ದಿವಸಗಳಲ್ಲಿ ಬಟ್ಟೆಗಳನ್ನು ಮಲ್ಲಿಗೆಯ ಹೂವಿನಷ್ಟು ಬೆಳ್ಳಗೆ ಒಗೆದುಕೊಡಬೇಕು. ಅಗಸರು ಕುಶಲತೆಯಿಂದ ಬಟ್ಟೆಗಳನ್ನು ಒಗೆದು ಮಡಿಮಾಡಿಕೊಟ್ಟರೆ ಬಟ್ಟೆಯ ಬೆಲೆಗೆ ತಕ್ಕಹಾಗೆ ಮಜೂರಿ ದೊರೆಯುತ್ತಿತ್ತು ; ಉತ್ತಮ ಉಡುಪುಗಳಿಗೆ ಒಂದು ಒಗೆಗೆ 12 ಆಣೆ; ಮಧ್ಯಮವರ್ಜೆಯ ಉಡುಪಿಗೆ 6 ಆಣೆ, ಇತರ ಉಡುಪುಗಳಿಗೆ 3 ಆಣೆ ಪ್ರಕಾರ ಕೂಲಿ ಸಿಕ್ಕುತ್ತಿತ್ತು.

ಅಕ್ಕಸಾಲಿಗನ ವಿಷಯದಲ್ಲೂ ಕೂಡ ಕಟ್ಟುಕಟ್ಟಳೆಗಳಿದ್ದುವು; ನಿಯಮಿತಕಾಲದಲ್ಲಿ ಒಡವೆಗಳನ್ನು ಮಾಡಿಕೊಡಬೇಕು. ಆಭರಣಗಳನ್ನು ಸುವರ್ಣಾಧ್ಯಕ್ಷನಿಗೆ ತಿಳಿಸದೆ ಕೊಂಡುಕೊಂಡು ಕರಗಿಸಕೂಡದು. ಹಾಗೆ ಮಾಡಿದಲ್ಲಿ ಶಿಕ್ಷೆಗೆ ಗುರಿಯಾಗುತ್ತಿದ್ದನು. ಸುವರ್ಣದೊಡನೆ ಸೇರಿ ಲೋಹಗಳನ್ನು ಮಿಶ್ರಮಾಡಿ ಆಭರಣಗಳನ್ನು ಮಾಡಿಕೊಟ್ಟರೆ ದಂಡ ತೆರಬೇಕಾಗಿತ್ತು. ವಜ್ರವೈಡೂರ್ಯ ಮತ್ತು ಹವಳಗಳು ಸರ್ಕಾರದ ಸ್ವತ್ತು. ಭೂಮಿಯಲ್ಲಿ ಅಡಗಿರುವ ಖನಿಜ ಸಂಪತ್ತುಗಳನ್ನು ತೋರಿಸಿ ಕೊಟ್ಟವರಿಗೆ ಸಿಕ್ಕಿದ ಸಂಪತ್ತಿನಲ್ಲಿ ಷಡ್ಭಾಗ ಸಂದಾಯವಾಗಿ, ಮಿಕ್ಕದ್ದು ಕೋಶಕ್ಕೆ ಸೇರುತ್ತಿತು.

ವೈದ್ಯರು ಕುಶೀಲವರು, ನೌಭಿಕರು ರೂಪದಾಸಿ ಮತ್ತು ನರ್ತಕಿಯರು ತಮ್ಮ ತಮ್ಮ ವೃತ್ತಿಗಳನ್ನು ಶಿಸ್ತಿನಿಂದ ನಡೆಸಿಕೊಳ್ಳಬೇಕಾಗಿತ್ತು. ನಿಬಂಧನೆಗಳಿಗೆ ವ್ಯತಿರಿಕ್ತವಾಗಿ ನಡೆದರೆ ಸರ್ಕಾರವು ಶಿಕ್ಷೆವಿಧಿಸುತ್ತಿತ್ತು.

ವೈದ್ಯವೃತ್ತಿಯ ವಿಷಯದಲ್ಲಿ ಕೌಟಿಲ್ಯನು ಮಾಡಿರುವ

ನಿಯಮ ನಿಬಂಧನೆಗಳು ಅತ್ಯುಗ್ರವಾಗಿವೆ. ಪ್ರಾಣಹಾನಿಯ ನ್ನುಂಟುಮಾಡುವ ಉಪದ್ರವವು ರೋಗಿಯಲ್ಲಿ ಕಂಡರೆ ವೈದ್ಯನು ತಕ್ಷಣವೇ ಸರ್ಕಾರಕ್ಕೆ ತಿಳಿಸಬೇಕು. ಹಾಗೆ ತಿಳಿಸದೆ ಇದ್ದರೆ ಅಥವಾ ತನ್ನ ಔದಾಸೀನ್ಯದಿಂದ ರೋಗಿಯ ಖಾಯಿಲೆಯನ್ನು ಹೆಚ್ಚುಮಾಡಿ ಅವನ ಮೃತ್ಯುವಿಗೆ ಕಾರಣನಾದರೆ ವೈದ್ಯನು ಕಠಿಣಶಿಕ್ಷೆಗೆ ಗುರಿಯಾಗುತ್ತಿದ್ದನು.

ಗಾನಕಲೆಯಲ್ಲಿ ನಿಪುಣರಾದವರೂ ನಿರ್ದಿಷ್ಟವಾದ ಕಾಲ ದಲ್ಲಿ ಜನರಿಗೆ ಮನೋರಂಜಕವಾಗುವಂತೆ ಗಾನಮಾಡಬೇಕು. ಜನರನ್ನು ಅದರಲ್ಲಿ ಮುಗ್ಧರನ್ನಾಗಿ ಮಾಡಿ ಅವರ ಜೀವನೋ ಪಾಯಕ್ಕೆ ಭಂಗಬರದಂತೆ ನಿರ್ದಿಷ್ಟವಾದ ಕಾಲಗಳಲ್ಲಿ ಹಾಡ ಬೇಕು. ಹೀಗೆಯೇ ವರ್ತಕರು ಮುಂತಾದ ವಿಚಾರದಲ್ಲೂ ಕಡುತರವಾದ ನಿಬಂಧನೆಗಳಿವೆ. ವೃತ್ತಿಗಳಲ್ಲಿ ಸರ್ಕಾರದ ನೌಕರಿ ಬಹುಮುಖ್ಯವಾದುದಾಗಿತ್ತು. ಸರ್ಕಾರದ ನೌಕರರನ್ನು ಚೆನ್ನಾಗಿ ಪರೀಕ್ಷಿಸಿ ನಿಯಮಿಸಿಕೊಳ್ಳುತ್ತಿದ್ದರು. ನಂಬಿಕೆಯಿಂದ ಕೆಲಸ ಮಾಡಿದವರಿಗೆ ನಿರ್ದಿಷ್ಟವಾದ ವೇತನವು ವಿಧಾಯಕವಾಗಿತ್ತು.

ವೃತ್ತಿಗಳಲ್ಲಿ ವರ್ಷಕ್ಕೊಂದು ಬಾರಿ ಆಡಳಿತ ಉದ್ಯೋಗಿಗಳ ವೇತನಗಳನ್ನು ದ್ರವ್ಯರೂಪವಾಗಿಯೇ ಕೊಡುವ ವಾಡಿಕೆಯಿತ್ತು. "ಭೃತ್ಯಭರಣೀಯಂ" ಎಂಬ ಪ್ರಕರಣದಲ್ಲಿ ಕೌಟಿಲ್ಯನು ಕೊಟ್ಟಿರುವ ಸರ್ಕಾರಿ ಅಧಿಕಾರಿಗಳ ವೇತನದ ಪಟ್ಟಿ ಈ ರೀತಿ ಯಾಗಿದೆ: ಮಂತ್ರಿ, ಪುರೋಹಿತ, ಯುವರಾಜ, ರಾಣಿ, ರಾಜನತಾಯಿ, ಮತ್ತು ರಾಜಗುರು—ಇವರುಗಳಿಗೆ 48,000 ಪಣಗಳು;* ದೌವಾರಿಕ, ಅಂತರ್ವಂಶಿಕ ಪ್ರಶಾಸ್ತಾ, ಸನ್ನಿ

---

* ಪಣ ಒಂದಕ್ಕೆ ಸುಮಾರು 12 ಆಣೆ. ಇಲ್ಲಿ ಕೊಡುವ ವೇತನ ವಾರ್ಷಿಕವೇತನ

ಧಾತಾ ಮತ್ತು ಆ ದರ್ಜೆಯ ಅಧಿಕಾರಿಗಳಿಗೆ 24,000 ಪಣ; ಪೌರ, ವ್ಯವಹಾರಿಕ, ಕಾರ್ವಾಂತಿಕ ಮತ್ತು ಮಂತ್ರಿ ಪರಿಷತ್ತಿನ ಸದಸ್ಯರಿಗೆ 12,000 ಪಣ; ಸಾಮಾನ್ಯ ನೌಕರುಗಳಿಗೆ 500 ಪಣ; ಬಡಗಿ ಮುಂತಾದ ಕಾರುಕರಿಗೆ 120 ಪಣ; ಚಂಗೂಲಿಗಳಿಗೆ 60 ಪಣ. ಕೆಲವು ವೇಳೆ ವೇತನದ ಜೊತೆಗೆ ಭೂಮಿ ಮತ್ತು ಆಹಾರಸಾಮಗ್ರಿಗಳನ್ನು ಅಧಿಕಾರಿಗಳು ಪಡೆಯುತ್ತಿದ್ದರು. ಗೋಪ, ಸ್ಥಾನೀಯ ಮುಂತಾದ ಅಧಿಕಾರಿಗಳಿಗೆ ವೇತನದ ಬದಲಾಗಿ ಮನೆ ಭೂಮಿ ಕಾಣಿಗಳನ್ನು ಸರ್ಕಾರವು ಕೊಡುತ್ತಿತ್ತು. ಈ ಅಧಿಕಾರಿಗಳು ಭೂಮಿ ಮುಂತಾದ ಸ್ಥಿರ ಸ್ವತ್ತುಗಳನ್ನು ಅನುಭವಿಸಿ ವಂಶಪರಂಪರೆಯಾಗಿ ಅವಿಭಕ್ತವಾಗಿ ನಡೆಯಿಸಿಕೊಂಡು ಬರಬೇಕಾಗಿತ್ತು.

---

# ೭. ಮಹಿಳೆಯರ ಸ್ಥಾನ ಮತ್ತು ಹಕ್ಕುಬಾಧ್ಯತೆಗಳು

ಆರ್ಯರೆನ್ನಿಸಿಕೊಳ್ಳುವವರ ಜೀವಮಾನದಲ್ಲಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕುವಿಧಗಳಾದ ಅವಸ್ಥೆಗಳು ವಿಹಿತವಾಗಿದ್ದುವು. ಸ್ತ್ರೀಯು ವಿವಾಹಿತಳಾದಮೇಲೆ ತನ್ನ ಏಕತ್ವವನ್ನು ಬಿಟ್ಟು ಪುರುಷನ ಸಮಭಾಗಿಯಾಗಿ ವರ್ತಿಸಿ, ಸಾಂಘಿಕ ಮತ್ತು ಮತ ವಿಚಾರಗಳಲ್ಲಿ ಪತಿಯೊಡನೆ ಸೇರಿ ಕೆಲಸಮಾಡುವುದು ಅವಳ ಮುಖ್ಯ ಧರ್ಮವಾಗಿತ್ತು.

ಭಾರ್ಯಾಭರ್ತರಿಬ್ಬರೂ ಸೇರಿ ಮಾಡುವ ಕೆಲಸಗಳಿಗೆ ಧರ್ಮ ಶಾಸ್ತ್ರಗಳ ಅಂಗೀಕಾರವಿತ್ತೇ ಹೊರತು ಪ್ರತ್ಯೇಕವಾಗಿ ಮಾಡಿದ ಕೆಲಸಗಳಿಗಿರಲಿಲ್ಲ. ಕೌಟಿಲ್ಯನು ಬ್ರಾಹ್ಮ, ಪ್ರಾಜಾಪತ್ಯ, ಆರ್ಷ ಮತ್ತು ದೈವಪದ್ಧತಿಯ ವಿವಾಹಗಳು ಪ್ರಾಚೀನವಾದು ವೆಂದೂ ಶಾಸ್ತ್ರೀಯವಾದುವೆಂದೂ ಹೇಳುತ್ತಾನೆ. ಅರ್ಥಶಾಸ್ತ್ರದ ಪ್ರಕಾರ ಗಾಂಧರ್ವ, ಆಸುರ, ರಾಕ್ಷಸ, ಪೈಶಾಚ ವಿವಾಹಗಳೂ ಕೂಡ ತಾಯಿತಂದೆಗಳ ಅನುಮತಿಯಿದ್ದರೆ ಸಮಾಜದಲ್ಲಿ ಮನ್ನಣೆ ಹೊಂದುವುವು.

ಹೆಂಗಸು ಹನ್ನೆರಡನೆಯ ವರ್ಷಕ್ಕೆ ಬ್ರಹ್ಮಚಾರಿಣಿ, ಹದಿನಾರಕ್ಕೆ ಪ್ರಾಜಾಪತ್ಯ ವಿವಾಹಕ್ಕೆ ಯೋಗ್ಯಳಾಗುತ್ತಿದ್ದಳು. ಸಂತತಿಯಾಗಬೇಕೆಂದೇ ಪರಮಾತ್ಮನು ಸ್ತ್ರೀಯರನ್ನು ನಿರ್ಮಾಣ ಮಾಡಿದ್ದನೆಂದು ಕೌಟಿಲ್ಯನ ನಂಬಿಕೆ. ಮಕ್ಕಳಾಗದಿದ್ದರೆ ಲಗ್ನವಾದನಂತರ ಎಂಟು ವರ್ಷ ಕಾಯ್ದು ಅನಂತರ ಪುರುಷನು ಅನ್ಯ ಸ್ತ್ರೀಯನ್ನು ಪಾಣಿಗ್ರಹಣ ಮಾಡಿಕೊಳ್ಳಬಹುದಾಗಿತ್ತು. ಹೆಣ್ಣು ಮಕ್ಕಳು ಹುಟ್ಟಿದರೆ ಹನ್ನೆರಡು ವರ್ಷಗಳ ತನಕ ಪುನರ್ವಿವಾಹಕ್ಕಾಗಿ ತಡೆಯಬೇಕು. ಪುತ್ರಾಕಾಂಕ್ಷೆಯೇ ಬಲವಾಗಿದ್ದ ಪಕ್ಷದಲ್ಲಿ ಹನ್ನೆರಡು ವರ್ಷವಾದ ಮೇಲೆ ಅನ್ಯ ಸ್ತ್ರೀಯನ್ನು ವರಿಸಬಹುದು. ಈ ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಪುರುಷನು ಹೆಂಗಸಿಗೆ ಶುಲ್ಕ, ಸ್ತ್ರೀಧನ, ವೃತ್ತಿ ಅಧಿವೇದನಕಾರ್ಮಾರ್ಥಕ್ಕಾಗಿ ಹಣ ಮುಂತಾದುವುಗಳನ್ನು ಕೊಟ್ಟು, ಸರ್ಕಾರಕ್ಕೆ ೨೪ ಪಣ ದಂಡ ಸಲ್ಲಿಸಬೇಕಾಗಿತ್ತು. ಈ ರೀತಿಯಾಗಿ ಹಣ ವಿನಿಯೋಗಕ್ಕೆ ಶಕ್ತಿ ಸಂಪತ್ತುಗಳಿದ್ದ ಪಕ್ಷದಲ್ಲಿ ಎಷ್ಟುಮಂದಿ ಸ್ತ್ರೀಯರನ್ನಾದರೂ ವರಿಸಬಹುದಾಗಿತ್ತು. ಹೆಂಡತಿಯು ಅವಿನೀತೆಯಾದರೆ ಬಯ್ದಾಗಲಿ,

ಬಿದಿರುಕೋಲಿನಿಂದ ಅಥವಾ ಅಂಗೈಯಿಂದ ಹೊಡೆದಾಗಲಿ, ಅವಳನ್ನು ಧರ್ಮಮಾರ್ಗಕ್ಕೆ ತಿರುಗಿಸಬೇಕು. ಸ್ವೇಚ್ಛೆಯಿಂದ ನಡೆಯುವ ದುಷ್ಟ ಹೆಂಗಸರು ದಂಡತೆರಬೇಕಾಗಿತ್ತು. ದುಡ್ಡು ಕೊಟ್ಟು ದೇಹದಂಡಗಳನ್ನು ತಪ್ಪಿಸಿಕೊಳ್ಳಬಹುದಾಗಿತ್ತು

ಗೃಹಿಣಿಯು ಗಂಡನಿಗೆ ವಿರೋಧವಾಗಿ ನಡೆದರೆ, ಅಪ್ಪಣೆ ಯಿಲ್ಲದೆ ಅಕ್ಕಪಕ್ಕದ ಮನೆಗಳಿಗೆ ಹೋದರೆ ಅವಳು ದಂಡ ಕೊಡಬೇಕಾಗಿತ್ತು. ಆದರೆ ದಾನ, ಧರ್ಮ, ಯಾತ್ರಾಕಾಂಕ್ಷೆ ಗಾಗಿ ಸ್ತ್ರೀ ಸ್ವಾತಂತ್ರ್ಯದಿಂದ ವರ್ತಿಸುವುದಕ್ಕೆ ಅನುಮತಿ ಯಿತ್ತು. ರಾಜದ್ರೋಹ, ನೀಚವಾದ ಸ್ವೈರವೃತ್ತಿ, ಗಾರ್ಹ ಸ್ಥ್ಯಕ್ಕೆ ವಿರೋಧವಾದ ವರ್ತನೆಗಳಿಂದ ಗೃಹಿಣಿಯು ತನಗೆ ಸಲ್ಲಬೇಕಾದ ಸ್ತ್ರೀಧನ, ಆಹಿತ ಮತ್ತು ಶುಲ್ಕಗಳನ್ನು ಕಳೆದು ಕೊಳ್ಳುತ್ತಿದ್ದಳು.

ಕೌಟಿಲ್ಯನ ಕಾಲದಲ್ಲಿ ಹೆಂಗಸರಿಗೆ ತಮ್ಮ ಹಕ್ಕುಬಾಧ್ಯತೆಗಳಲ್ಲಿ ಹೆಚ್ಚು ಸ್ವಾತಂತ್ರ್ಯವಿದ್ದಂತೆ ತೋರುತ್ತದೆ. ಬುದ್ಧನು ಧರ್ಮ ಸುಧಾರಕನಾಗಿ ಸ್ತ್ರೀಪುರುಷರ ಸಂಬಂಧವು ಧರ್ಮಸಂಬಂಧ ವೆಂದೂ ಪ್ರಪಂಚಸೃಷ್ಟಿಯಲ್ಲಿ ಅವರು ಸಮಾನರೆಂದೂ ಪ್ರಚಾರ ಮಾಡಿದ ಸಲುವಾಗಿ ಅವನ ತರುವಾಯ ಮಹಿಳೆಯರು ಕೆಲವು ಶತಮಾನಗಳು ಹೆಚ್ಚು ಸ್ವಾತಂತ್ರ್ಯವನ್ನು ಅನುಭವಿಸುತ್ತಿ ದ್ದಂತೆ ಕಾಣುತ್ತದೆ. ಪುರುಷನಿಗೆ ಸಮಾನವಾದ ಹಕ್ಕುಗಳಿ ದ್ದವು. ಮಿಶ್ರವಿವಾಹ ಪದ್ಧತಿಯು ರೂಢಿಯಲ್ಲಿದ್ದಿತು. ಕ್ಷತ್ರಿಯ ಮತ್ತು ವೈಶ್ಯಪತ್ನಿಯರಿಂದ ಉತ್ಪನ್ನರಾದ ಮಕ್ಕಳು ಸವರ್ಣರೆ ನ್ನಿಸಿಕೊಳ್ಳುತ್ತಿದ್ದರು. ಅನುಲೋಮ ವಿವಾಹಕ್ಕೆ ಸಮ್ಮತಿ ಯಿತ್ತು. ಪ್ರತಿಲೋಮ ವಿವಾಹಗಳನ್ನು ಕೌಟಿಲ್ಯನು ನಿಷೇಧಿಸು ತ್ತಾನೆ. ಅಶೋಕಚಕ್ರವರ್ತಿಯು ಸುಭದ್ರಾಂಗಿ ಎಂಬ ಬ್ರಾಹ್ಮಣ

ಕನ್ಯೆಯು ಮಗನಾಗಿದ್ದ ಅಂಶವು ಐತಿಹಾಸಿಕವಾದದರಿಂದ ಪ್ರತಿಲೋಮವಿವಾಹಗಳೂ ರೂಢಿಯಲ್ಲಿ ಇದ್ದಿರಬಹುದು.

ಹೆಂಗಸು ಪುನರ್ವಿವಾಹ ಮಾಡಿಕೊಳ್ಳಬಹುದಾಗಿತ್ತು. ಪುನರ್ವಿವಾಹಕ್ಕೆ ಪತಿಯು ಮೃತನಾಗಿರಬೇಕೆಂದಿರಲಿಲ್ಲ. ಬ್ರಾಹ್ಮಣ ಪತಿಯು ವಿದ್ಯಾರ್ಜನೆಗೆ ಪರದೇಶಕ್ಕೆ ಹೋಗಿ ಹತ್ತು ವರ್ಷಗಳ ನಿಯಮಿತ ಕಾಲದಲ್ಲಿ ಬಾರದಿದ್ದ ಪಕ್ಷದಲ್ಲಿ ಮಕ್ಕಳಿಲ್ಲದ ಸ್ತ್ರೀಯು ಅನ್ಯಪುರುಷನನ್ನು ವರಿಸಬಹುದಾಗಿತ್ತು. ಕ್ಷತ್ರಿಯ ವರ್ಗದಲ್ಲಿ ಗಂಡನು ಮೃತನಾಗುವವರೆಗೂ ತಡೆಯಬೇಕಾಗಿತ್ತು. ಆದರೆ ಕ್ಷತ್ರಿಯ ಸ್ತ್ರೀಯು ಪುತ್ರಾಕಾಂಕ್ಷೆಯಿಂದ ಸವರ್ಣ ಪುರುಷರಿಂದ ಮಕ್ಕಳನ್ನು ಪಡೆದರೆ ಅದು ಅಧರ್ಮವೆನ್ನಿಸಿಕೊಳ್ಳುತ್ತಿರಲಿಲ್ಲ.

ಧರ್ಮವಿವಾಹಕ್ಕನುಸಾರವಾಗಿ ಮದುವೆಯಾದ ಕುಮಾರಿಯು, ಪರದೇಶಗಳಿಗೆ ಹೋದ ಪತಿಗಾಗಿ, ಆರು ತಿಂಗಳು ಮಾತ್ರ ತಡೆದು ಪುತ್ರಾಪೇಕ್ಷೆಯಿಂದ ಧರ್ಮಾಧಿಕಾರಿಗಳ ಅನುಮತಿಯನ್ನು ಪಡೆದು ತನ್ನ ಇಚ್ಛಾನುಸಾರ ಪತಿಯ ಜ್ಞಾತಿಗಳಲ್ಲೊಬ್ಬರನ್ನು ವರಿಸಬೇಕಾಗಿತ್ತು. ಪತಿಯು ದೀರ್ಘಪ್ರವಾಸಮಾಡಿದರೆ, ರಾಜದ್ರೋಹಿಯಾದರೆ, ದುರ್ವರ್ತನೆಯಲ್ಲಿ ನಿರತನಾದರೆ, ಧರ್ಮತ್ಯಾಗಿಯಾದರೆ ಅಥವಾ ನಪುಂಸಕನಾದರೆ ಹೆಂಡತಿಯು ಅವನನ್ನು ತ್ಯಜಿಸಿ ಅವನ ತಮ್ಮಂದಿರಲ್ಲಿಯೋ ಜ್ಞಾತಿಗಳಲ್ಲಿಯೋ ಎರಡನೆಯ ಪತಿಯನ್ನು ಆರಿಸಿಕೊಳ್ಳಬಹುದಾಗಿತ್ತು. ಜ್ಞಾತಿಗಳು ಅವಳನ್ನು ಕಾಪಾಡುವುದಕ್ಕೆ ಒಪ್ಪದಿದ್ದರೆ ಅವಳು ಅನ್ಯಪುರುಷನನ್ನು ವರಿಸುವುದಕ್ಕೆ ಸ್ವಾತಂತ್ರ್ಯವಿತ್ತು.

ಕೌಟಿಲ್ಯನ ಕಾಲದಲ್ಲಿ ಅಧಿವೇದನ ಅಥವಾ ವಿವಾಹವಿಚ್ಛೇದ ರೂಢಿಯಲ್ಲಿದ್ದಹಾಗೆ ಕಾಣುತ್ತದೆ. ಪತಿಪತ್ನಿಯರು ಪರಸ್ಪರ

ಇಚ್ಛೆಗೆ ವಿರೋಧವಾಗಿ ಪಾಣಿಗ್ರಹಣಸಂಬಂಧವನ್ನು ರದ್ದು ಮಾಡುವುದಕ್ಕಾಗುತ್ತಿರಲಿಲ್ಲ. ಅವರಿಬ್ಬರೂ ವಿವಾಹಸಂಬಂಧವನ್ನು ತ್ಯಜಿಸುವುದಕ್ಕೆ ಒಪ್ಪಿದ ಪಕ್ಷದಲ್ಲಿ ಅಧಿವೇದನ ಸಂಭವಿಸುತ್ತಿತು. ಬ್ರಾಹ್ಮ, ಪ್ರಜಾಪತ್ಯ, ಆರ್ಷ, ದೈವ ವಿವಾಹ ಪದ್ಧತಿಗಳ ಪ್ರಕಾರ ಪಾಣಿಗ್ರಹಣವಾಗಿದ್ದರೆ ಅಧಿವೇದನಕ್ಕೆ ಸಮ್ಮತಿಯಿಲ್ಲವೆಂದು ಕೌಟಿಲ್ಯನ ಅಭಿಪ್ರಾಯ.

ಐಹಿಕಸಾಧನೆಗೆ ತಕ್ಕಷ್ಟು ಆಹಾರ ಬಟ್ಟೆಯನ್ನು ಪತಿಯು ಹೆಂಗಸಿಗೆ ಒದಗಿಸಬೇಕಾಗಿತ್ತು. ಸ್ತ್ರೀಧನ, ಶುಲ್ಕ, ಆಹಿತ, ಅಧಿವೇದನಕ್ಕೆ ಸಮ್ಮತಿಕೊಟ್ಟಿದ್ದಕ್ಕಾಗಿ ಹಣ ಇವೆಲ್ಲವೂ ಗೃಹಿಣಿಗೆ ಸೇರತಕ್ಕದ್ದು. ಗಂಡನು ತ್ಯಜಿಸಿದರೆ ಶ್ವಶುರಕುಲದವರ ಆಶ್ರಯದಲ್ಲಿರತಕ್ಕದ್ದು. ಸ್ತ್ರೀಯು ಮೇಲೆ ಹೇಳಿದ ತನ್ನ ಸಂಪತ್ತನ್ನು ಮಕ್ಕಳ ಪೋಷಣೆಗಾಗಿಯೂ ಕಷ್ಟನಿವಾರಣೆಗಾಗಿಯೂ, ಧರ್ಮಕಾರ್ಯಗಳಿಗಾಗಿಯೂ ಯಾರ ಅಡ್ಡಿಯೂ ಇಲ್ಲದೆ ಉಪಯೋಗಿಸಬಹುದಾಗಿತ್ತು. ಪತಿಯ ಮರಣಾನಂತರ ಗೃಹಿಣಿಯು ಧರ್ಮನಿಷ್ಠಳಾಗಿ ಸಾಧ್ವೀಮಣಿಯಾದರೆ ಸ್ತ್ರೀಧನ, ಸ್ಥಾಪ್ಯಾಭರಣವನ್ನು ಜ್ಞಾತಿಗಳು ಅವಳಿಗೆ ಒಪ್ಪಿಸಬೇಕಾಗಿತ್ತು. ಅವಳ ಮರಣಾನಂತರ, ಗಂಡು ಹೆಣ್ಣುಮಕ್ಕಳಿಗೆ, ತಪ್ಪಿದಲ್ಲಿ ದಾಯಾದಿಗಳಿಗೆ ಅವಳ ಸಂಪತ್ತು ಸೇರತಕ್ಕದ್ದಾಗಿತ್ತು. ಆದರೆ, ಕುಟುಂಬಕಾಮದಿಂದ ಎರಡನೆ ಮದುವೆ ಅಪೇಕ್ಷಿಸಿದರೆ ಮಾವನು ಆರಿಸಿದ ಪುರುಷನನ್ನು ವರಿಸಿದಲ್ಲಿ ವಿವಾಹಕಾಲದಲ್ಲಿ ಅವಳ ಮಾವನು ಗತಿಸಿದ ಗಂಡನ ಸಂಪತ್ತನ್ನು ಅವಳಿಗೆ ಒಪ್ಪಿಸಬೇಕಾಗಿತ್ತು. ಮಾವನು ಒಪ್ಪದಿದ್ದವನನ್ನು ಮದುವೆಯಾದರೆ ಯಾವವಿಧವಾದ ಸಂಪತ್ತೂ ಅವಳಿಗೆ ಸೇರುತ್ತಿರಲಿಲ್ಲ.

ಹೆಂಗಸಿಗೆ ಜನ್ಮಸಹಜಗುಣಗಳಿಗೆ ಅನುಗುಣವಾಗಿ ಸ್ವಾತಂ

ತ್ರ್ಯವನ್ನು ಕೊಡುವುದು ಸಮಾಜದ ಮುಖ್ಯ ಧ್ಯೇಯವಾಗಿತ್ತು. ಕೌಟಿಲ್ಯನ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚುಗೌರವ ಸಲ್ಲುತ್ತಿದ್ದ ಹಾಗೆ ಕಾಣುತ್ತದೆ. ಹೆಂಗಸು ಗಂಡಸಿನ ಐಹಿಕ, ಪಾರತ್ರಿಕ ಸಂಬಂಧವಾದ ಸುಖ, ದುಃಖ, ಸಂಪತ್ತು, ವಿಪತ್ತು, ವೈಭವ, ಪರಿಭವ ಇವೇ ಮೊದಲಾದ ಸಮಸ್ತ ವಿಷಯಗಳಿಗೂ ಕಾರಣ ಕರ್ತಳು ಮತ್ತು ಸಮಭಾಗಿನಿಯೆಂದು ಕೌಟಿಲ್ಯನು ತಿಳಿದಿದ್ದ ನೆಂಬುವುದು ಅರ್ಥಶಾಸ್ತ್ರದಲ್ಲಿ ವ್ಯಕ್ತವಾಗಿದೆ. ಕೌಟಿಲ್ಯನು ಕಾಲಾಧೀನನಾದ ಮೇಲೆ ಕೆಲವು ಕಾಲದಲ್ಲಿಯೇ ಅಧಿ ವೇದನ, ವಿಧವಾವಿವಾಹ, ಪ್ರೌಢಾವಿವಾಹ, ಸ್ವಯಂವರ, ಅನುಲೋಮ ಪ್ರತಿಲೋಮ ವಿವಾಹಗಳು ಅಧರ್ಮವೆಂದು ಗಣಿಸಲ್ಪಟ್ಟದ್ದರಿಂದ ನಿಂತುಹೋದವು. ಸ್ತ್ರೀಪುರುಷರೆಂಬ ಭೇದ ಭಾವದೊಂದಿಗೆ ಸ್ವಭಾವತಾರತಮ್ಯವಿರುವುದರಿಂದ ಪುರುಷ ಸಮಾಜವು ಸ್ತ್ರೀಯನ್ನು ಪೂಜ್ಯಭಾವದಿಂದ ಪೋಷಿಸಬೇಕೆಂದು ಸ್ಮೃತಿಕಾರರ ಮತವಾಯಿತು. ಮನುವು ತನ್ನ ಸ್ಮೃತಿಯಲ್ಲಿ ಹೇಳಿರುವ "ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂಬ ಉಕ್ತಿಯು ಸಮಾಜದ ಉನ್ನತ ಉದ್ದೇಶ ವಾಯಿತು ಆದರೆ ಧರ್ಮವು ಸ್ತ್ರೀಯರನ್ನು ಆಶ್ರಯಿಸಿ ಕೊಂಡಿರುವುದರಿಂದಲೂ, ಸ್ತ್ರೀಜನಾಂಗದ ಉತ್ಕರ್ಷವೇ ಸಮಾಜದ ಏಳಿಗೆಗೆ ಮೂಲವಾದುದರಿಂದಲೂ, ಅವರು ದುಷ್ಟೆ ಯರಾದರೆ ವರ್ಣಸಂಕರವಾಗಬಹುದೆಂದು ಭಯವಿದ್ದುದರಿಂ ದಲೂ ಸ್ಮೃತಿಕಾರರು ಹೆಂಗಸಿನ ಸ್ವಾತಂತ್ರ್ಯವನ್ನು ಕಡು ತರವಾದ ನಿಯಮಗಳಿಂದ ಬಂಧಿಸಿದರು. ಆದುದರಿಂದ ಹೆಂಗಸು ಸ್ವಾರ್ಥತ್ಯಾಗದಿಂದ ಜೀವನಮಾಡುವುದೇ ಪರ ಮೋದ್ದೇಶವಾಯಿತು. ತನ್ನ ಗಂಡನು ಮಾಡುವ ಕೆಲಸ

ವನ್ನು ತಾನು ಮಾಡಬಾರದೆಂದೂ ಅನ್ಯ ಕೆಲಸಗಳು ಪ್ರತ್ಯೇಕ ವೆಂದೂ ಹೆಂಗಸು ತಿಳಿದಿದ್ದರಿಂದ ಅವಳು ಹೆಚ್ಚು ಸ್ವಾತಂತ್ರ್ಯ ಕ್ಕಾಗಿ ಹೋರಾಡುವ ಪ್ರಸಂಗಗಳೊದಗಲಿಲ್ಲ. ಪತಿಯೇ ಪರಮ ಗುರು, ಪತಿಯೇ ದೇವತೆ, ಪತಿಯೇ ಸದ್ಗತಿಯೆಂಬುದು ಹದಿ ಬದೆಯರ ಧರ್ಮವಾಯಿತು.

---

# ೮. ಉಪಸಂಹಾರ

ಅರ್ಥಶಾಸ್ತ್ರದಲ್ಲಿ ವರ್ಣಿತವಾಗಿರುವ ಸಂಸ್ಕೃತಿಯಲ್ಲಿ ದೂಷ್ಯವೂ ಅಗ್ರಾಹ್ಯವೂ ಆದ ಅನೇಕ ರೀತಿನೀತಿಗಳೂ ದುಷ್ಟ ಪದ್ಧತಿಗಳೂ ಕಾಣುತ್ತವೆ. ಸ್ಮೃತಿಗಳಿಗೆ ವಿರುದ್ಧವಾದ ಮತ್ತು ಅಧರ್ಮವೆಂದು ಕಾಣುವ ಅನೇಕ ಪದ್ಧತಿಗಳೂ ಆಚಾರಗಳೂ ಕೌಟಿಲ್ಯನ ಒಪ್ಪಿಗೆಯನ್ನು ಹೊಂದಿದ ಹಾಗೆ ತೋರುತ್ತದೆ. ಪ್ರಭುವಿನ ಮತ್ತು ರಾಷ್ಟ್ರದ ಬಲವನ್ನು ಗಳಿಸಲು ಎಷ್ಟು ಹೀನ ವಾದ ನೀತಿ ಉಪಾಯಗಳನ್ನಾದರೂ ಆಚರಿಸಬಹುದು ಎನ್ನು ವುದು ಅರ್ಥಶಾಸ್ತ್ರಸಮ್ಮತವಾದುದು.

ರಾಜಕುಮಾರರನ್ನೂ ಉನ್ನತಾಧಿಕಾರಿಗಳನ್ನೂ ಅಂತಃಪುರ ದಲ್ಲಿ ಕೊಲೆಮಾಡುವುದು, ಕ್ಷಾಮ, ಆಕ್ರಮಣಭಯ, ಮುಂ ತಾದ ರಾಷ್ಟ್ರವಿಪತ್ತಿನ ನೆಪದಲ್ಲಿ ಶ್ರೀಮಂತರನ್ನು ಸುಲಿಯು ವುದು, ವಿಧವೆಯರ ಮತ್ತು ಗುಡಿಗಳ ಧನವನ್ನು ಅಪಹರಿಸು ವುದು, ಧರ್ಮದ ಹೆಸರಿನಲ್ಲಿ ವಿಧವಿಧವಾದ ತೆರಿಗೆಗಳನ್ನು ವಸೂ

ಲುಮಾಡುವುದು, ಮಾಂಸಾಹಾರಕ್ಕಾಗಿ ಅಸಂಖ್ಯಾತ ಪ್ರಾಣಿಗಳನ್ನು ಕೊಲ್ಲುವುದು, ಮದಿರಾಗೃಹಗಳನ್ನು ಕಟ್ಟಿಸಿ ಸುರಾಪಾನಕ್ಕೆ ಉತ್ತೇಜನಕೊಡುವುದು, ಪುರುಷ ಪುರುಷರರಿಗೂ ಪುರುಷ ಸ್ತ್ರೀಯರರಿಗೂ ದೂತರ ಮತ್ತು ಗುಪ್ತಚಾರರ ಮೂಲಕ ಅವಿಶ್ವಾಸ ತಂದುಹಾಕುವುದು, ಶತ್ರುಗಳನ್ನು ಕೊಲ್ಲುವುದಕ್ಕೆ ನಾನಾವಿಧದ ಔಷಧ ವಿಷ, ಮಂತ್ರತಂತ್ರಗಳನ್ನು ಪ್ರಯೋಗಿಸುವುದು—ಇವೇ ಮುಂತಾದ ದುಷ್ಟಪದ್ಧತಿಗಳು ಅರ್ಥಶಾಸ್ತ್ರವಾಚಕರಿಗೆ ಮನವರಿಕೆಯಾಗದಿರದು.

ಕೌಟಲ್ಯನಿಗೆ ರಾಷ್ಟ್ರದ ಶಕ್ತಿಯನ್ನು ಕುಗ್ಗಿಸುವ ಧರ್ಮವಲ್ಲಿ ನಂಬಿಕೆಯಿರಲಿಲ್ಲ. ಅಂದರೆ ವೇದತತ್ವಗಳ ಅಥವಾ ವರ್ಣಾಶ್ರಮ ಧರ್ಮಗಳ ವಿರೋಧಿ ಎಂದಲ್ಲ ವೇದಜ್ಞಾನ ಆವಶ್ಯಕವೆಂದೂ, ವರ್ಣಾಶ್ರಮ ಧರ್ಮಗಳ ಅನುಸರಣೆಯಿಂದ ಇಹಪರಲೋಕಗಳಲ್ಲಿ ಸುಖವುಂಟೆಂದೂ, ಇಲ್ಲದಿದ್ದರೆ ವರ್ಣಸಂಕರವಾಗಿ ರಾಷ್ಟ್ರ ಕ್ಷೀಣವಾಗುವುದೆಂದೂ ತಿಳಿದಿದ್ದನು. ಆದರೆ ಮತವನ್ನು ರಾಷ್ಟ್ರಾಡಳಿತಕ್ಕೆ ಅಧೀನವಾಗಿ ಉಪಯೋಗಿಸುವುದಕ್ಕೆ ಆಕಾಂಕ್ಷೆಯಿತ್ತು.

ರಾಷ್ಟ್ರಧ್ಯೇಯಸಿದ್ಧಿಗಾಗಿ ಉದಾಸ್ಥಿತ, ತಾಪಸ, ಬಿಕ್ಷುಕೀ, ಸನ್ಯಾಸಿ, ಸನ್ಯಾಸಿನಿಯರನ್ನು ಗೂಢಚಾರರನ್ನಾಗಿ ನೇಮಿಸುವುದು; ಅವರು ದೇವಧ್ಯಾನಪರರಂತೆ ನಟಿಸಿ ಜನರನ್ನು ಮೋಸಗೊಳಿಸುವುದು; ದೇವತಾಧ್ಯಕ್ಷನು ರಾತ್ರಿವೇಳೆಗಳಲ್ಲಿ ಅಗೋಚರನಾಗಿ ದೇವರ ಸ್ಥಾಪನೆ ಮಾಡಿಸಿ, ಉತ್ಸವ ಸಮಾರಂಭಗಳನ್ನು ನಡೆಸಿ ಜನಗಳಿಂದ ಕಾಣಿಕೆಗಳನ್ನು ವಸೂಲುಮಾಡಿ ಬೊಕ್ಕಸವನ್ನು ತುಂಬುವುದು ; ಕೆಲವು ಗೃಹಗಳು, ಗಿಡಗಳು, ಮಹತ್ವಪೂರಿತವಾದವು, ದೇವರ ಆವಾಸಸ್ಥಾನ, ಎಂದು ಸಾರಿ ಜನ

ರಿಂದ ಧರ್ಮ ತೆರಿಗೆಗಳನ್ನು ಸುಲಿಯುವುದು; ಆಕ್ರಮಣ ರಾಷ್ಟ್ರದ ರಾಜನು ದೇವಾಂಶ ಸಂಭೂತನು ಎಂದು ಮಹಾತ್ಮೆಗಳನ್ನು ಹುಟ್ಟಿಸಿ ಕಪಟವಿಲ್ಲದ ಜನರನ್ನು ಅವನ ಅಧಿಕಾರಕ್ಕೆ ವಶಪಡಿಸುವುದು—ಈ ಅಂಶಗಳಿಂದ, ಧರ್ಮಕ್ಕಾಗಲಿ, ಅಥವಾ ಮತಕ್ಕಾಗಲಿ ಅರ್ಥಶಾಸ್ತ್ರದಲ್ಲಿ ಉಚ್ಚಸ್ಥಾನವಿಲ್ಲವೆಂದು ವ್ಯಕ್ತವಾಗುತ್ತದೆ. ಬುದ್ಧನ ತತ್ವಗಳ ಪರಿಣಾಮ ಕೌಟಿಲ್ಯನ ಸಮಾಜದಲ್ಲಿ ಕಾಣುವದಿಲ್ಲ. ಬುದ್ಧನ ತತ್ವವು ಜನಜೀವನವನ್ನು ರೂಪಗೊಳಿಸಿದುದು ಮೌರ್ಯಸಾಮ್ರಾಟರ ಕಾಲಾನಂತರ.

ಕೌಟಿಲ್ಯನ ಕಾಲವು ಕಲಹ ವೈಷಮ್ಯಗಳಿಂದ ಕೂಡಿತ್ತು. ಶಾಂತಿ ಸುಖಗಳಿರಲಿಲ್ಲ. ರಾಜರ ಕುಟಿಲೋಪಾಯಗಳನ್ನು ಕುಟಿಲಸಾಧನಗಳಿಂದಲೇ ಮುರಿಯಬೇಕಾಗಿತ್ತು. ರಾಜದ್ರೋಹ ಭ್ರಾತೃದ್ರೋಹಪೂರಿತವಾದ ಜಗತ್ತಿನಲ್ಲಿ ಧರ್ಮವನ್ನಾಚರಿಸಿ ಬದುಕುವುದಕ್ಕೆ ಅವಕಾಶವಿರಲಿಲ್ಲ. ಅಹಿಂಸೆಯೇ ಪರಮ ಧರ್ಮ, ಶತ್ರುಮಿತ್ರರೆಂಬ ಭಾವನೆಯಿರಬಾರದು, ಎಂಬ ಒಂದು ಧರ್ಮ ಪರಾಕಾಷ್ಠತೆಯನ್ನು ಸರ್ವರೂ ಸರ್ವಕಾಲದಲ್ಲಿಯೂ ಆಚರಿಸಬೇಕೆಂದು ಕೌಟಿಲ್ಯನ ತತ್ವವಲ್ಲ. ಶಾಂತಿಯುಗದ ರೀತಿನೀತಿಗಳಿಗೂ ಕುಟಿಲ ಕಲಹ ಪೂರ್ಣ ಜಗತ್ತಿಗೂ ಭೇದವಿದೆ. ಒಂದರ ರೀತಿನೀತಿಗಳು ಇನ್ನೊಂದಕ್ಕೆ ಪ್ರಮಾಣವಾಗಲಾರವು. ರಾಜನು ಅವಲಂಬಿಸುವ ಆಪದ್ಧರ್ಮ ಕಾಲಾನುಕಾಲದಲ್ಲಿ ನಿಂದಾರ್ಹವಾದರೂ ಅವನ ಕಾಲದಲ್ಲಿ ಮಾತ್ರ ಅದು ಆತ್ಮಸಂರಕ್ಷಣೆಗೆ ಅನಿವಾರ್ಯವಾಗಿದ್ದಿರಬಹುದು.

ಕೌಟಿಲ್ಯನು ಧ್ಯೇಯವಾದಿಯಲ್ಲ, ಕೇವಲ ಕ್ರಿಯಾವಾದಿ. ಅರ್ಥಶಾಸ್ತ್ರವನ್ನು ಓದುವಾಗ ಈ ವಿಷಯವನ್ನು ನಾವು ನೆನಪಿನಲ್ಲಿಡಬೇಕು. ರಜಕೀಯದ ಗುರಿ ಅವನ ಮನಸ್ಸಿನಲ್ಲಿ ಸ್ಪಷ್ಟ

ವಾಗಿತ್ತು; ಅದು ಯಾವುದೆಂದರೆ: ಪ್ರಜೆಗಳ ಐಹಿಕ ಅಭ್ಯು ದಯ. ಕಾಲಕ್ಕೆ ಅನುಗುಣವಾದ ನೀತಿಯ ತಳಹದಿಯಮೇಲೆ ರಾಜ್ಯವನ್ನು ಸ್ಥಾಪನೆಮಾಡುವುದು ಉತ್ತಮವೆಂದು ಅವನ ನಂಬಿಕೆ. ರಾಜಕೀಯ ವಿಚಾರಗಳಲ್ಲಿ ಕಾರ್ಯಸಾಧನೆಗೆ ಪ್ರತಿ ಬಂಧಕಗಳನ್ನು ಮತಧರ್ಮಗಳು ತಂದೊಡ್ಡುವುವಾದರೆ ಅವು ಗಳನ್ನು ಅನುಸರಿಸಬೇಕಾಗಿಲ್ಲವೆಂಬುದು ಕೌಟಿಲ್ಯನ ಅಭಿಪ್ರಾಯ.

ರಾಷ್ಟ್ರವು ಧರ್ಮಕ್ಕೆ ಆಸರೆಯೆಂಬುದು ಅವನ ಗೌಣಪಕ್ಷ. ಪ್ರಜಾಹಿತಸಾಧನೆಗಾಗಿಯೇ ರಾಷ್ಟ್ರನಿರ್ಮಾಣವಾಗಿರತಕ್ಕದ್ದು. ಕೆಲವುವೇಳೆ ನೀತಿಯ ಅನುಸರಣೆಯಿಂದ ರಾಷ್ಟ್ರಸಿದ್ಧಿ ಯಾಗುವುದಾದರೆ ನೀತಿಯುಕ್ತವಾದ ಜೀವನವನ್ನು ಅವ ಲಂಬಿಸಬೇಕೆಂಬೇ ಅವನ ಮತ. ಕೆಲವು ನಿದರ್ಶನಗಳನ್ನು ಇಲ್ಲಿ ಕೊಡಬಹುದು. ರಾಜಕುಮಾರರು ತಂದೆಯನ್ನು ದ್ವೇಷಿ ಸುವುದಕ್ಕೆ ಅವಕಾಶವಾಗದಹಾಗೆ ಅವರನ್ನು ಭೋಗವಿಲಾಸ ಗಳಲ್ಲಿ ಮಗ್ನರನ್ನಾಗಿ ಮಾಡಬೇಕೆಂದು ವಾತವ್ಯಾಧಿ ಹೇಳುತ್ತಾನೆ. ಆದರೆ ಅಂಥ ಇಂದ್ರಿಯದಮನವಿಲ್ಲದ ಹೇಯವಾದ ಜೀವನ ದಿಂದ ಹುಳುಹಿಡಿದ ಮರದಂತೆ ರಾಜಮನೆತನವು ನಶಿಸಿಹೋಗಿ ರಾಷ್ಟ್ರಕ್ಕೆ ವಿಪತ್ತು ಒದಗುತ್ತದೆಯೆಂದು ಕೌಟಿಲ್ಯನ ಹೇಳಿಕೆ. ಆದರಿಂದಲೆ ರಾಜಕುಮಾರರ ವಿದ್ಯಾಭ್ಯಾಸದ ವಿಚಾರದಲ್ಲಿ ಕೌಟಿಲ್ಯನು ಹೆಚ್ಚು ಉತ್ಸಾಹ ಮತ್ತು ದಕ್ಷತೆಯನ್ನು ತೋರಿ ಸುತ್ತಾನೆ. ಪ್ರಭುವು ಕಾಲಾಧೀನನಾದರೆ ಅವನ ಅಮಾತ್ಯನು ಸಿಂಹಾಸನವನ್ನು ಅಪಹರಿಸಬಹುದೆಂದು ಭಾರದ್ವಾಜನ ಮತ. ಇದನ್ನು ಖಂಡಿಸಿ, ಈ ನೀತಿ ಪ್ರಜೆಗಳ ಕೋಪವನ್ನು ಉದ್ರೇ ಕಿಸುವುದಲ್ಲದೆ ಅಧರ್ಮವೂ ಆಗುತ್ತದೆಯೆಂದು ಕೌಟಿಲ್ಯನು ಹೇಳುತ್ತಾನೆ. ಪರರಾಷ್ಟ್ರದೊಡನೆ ಮಾಡಿದ ಪ್ರತಿಜ್ಞಾಪೂರ್ವಕ

ವಾದ ಸಂಧಿಗಳಿಗೆ ತಪ್ಪಿ ನಡೆಯುವುದು ಇಹಕ್ಕೂ ಪರಕ್ಕೂ ಹಾನಿಕರವಾದುದೆಂದು ಕೌಟಿಲ್ಯನು ಸ್ಪಷ್ಟವಾಗಿ ಹೇಳಿದ್ದಾನೆ.

ವ್ಯಾವಹಾರಿಕವಿಚಾರಗಳಲ್ಲಿ ರಾಜತಂತ್ರಜ್ಞನು ಧರ್ಮಕ್ಕೆ ಸಂಬಂಧಪಟ್ಟ ವಿಷಯಗಳನ್ನು ದೇಶದ ಆವಶ್ಯಕತೆಗೆ ತಕ್ಕಂತೆ ಬದಲಾಯಿಸಿಕೊಳ್ಳುವುದೇ ರಾಜನಿಗೆ ಸರಿಯಾದ ಮನೋಭಾವ. ಮನುಷ್ಯನು ಕಾಲ, ದೇಶ, ವರ್ತಮಾನಗಳಿಗೆ ಅಧೀನನಾಗಿರುವುದರಿಂದ ಅವನ ರೀತಿನೀತಿಗಳು ಅವನ ಸಂದರ್ಭಕ್ಕೆ ಅನುಗುಣವಾಗಿರುವುದೇ ಹೊರತು ಯಾವಾಗಲೂ ಧರ್ಮಾನುಗುಣವಾಗಿರುವುದಿಲ್ಲ. ಅಸಂದರ್ಭಕ್ಕೆ ಸಿಕ್ಕಿ ಮಾಡುವ ಅಧರ್ಮಗಳು ಆ ಕಾಲದಲ್ಲಿ ಧರ್ಮವೆನ್ನಿಸಬಹುದು ಕೌಟಿಲ್ಯನ ಅರ್ಥಶಾಸ್ತ್ರವು ಆ ಕಾಲದ ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳಿಗೆ ಹೊಂದಿಕೊಂಡಿದ್ದಾಗಿದ್ದಿತು. ಇವನ ಮೇಲ್ಪಂಕ್ತಿಯನ್ನನುಸರಿಸಿ ಅನೇಕ ಶತಮಾನಗಳವರೆಗೂ ರಾಜನೀತಿಜ್ಞರು ಗ್ರಂಥ ರಚನೆ ಮಾಡಿರುತ್ತಾರೆ. ಇವನ ಅನುಯಾಯಿಗಳಲ್ಲಿ ಕಾಮಂದಕ ಸೋಮದೇವ ಸೂರಿ—ಇವರು ಮುಖ್ಯವಾದವರು.

ಆದರೆ ಕಾಲಕ್ರಮದಲ್ಲಿ ಇದಕ್ಕೆ ಪ್ರತಿಯಾದ ರಾಜನೀತಿ ಪ್ರಬಲಗೊಂಡಿತು. ರಾಜತಂತ್ರಕ್ಕೂ ಧರ್ಮಜೀವನಕ್ಕೂ ಇರುವ ಪರಸ್ಪರ ಸಂಬಂಧವನ್ನು ಕುರಿತು ವಿಜ್ಞಾನೇಶ್ವರನು ತನ್ನ ಮಿತಾಕ್ಷರದಲ್ಲಿ ಈರೀತಿ ಹೇಳಿದ್ದಾನೆ: ' ಧರ್ಮಶಾಸ್ತ್ರಾಂತರ್ಗತಮೇವ ರಾಜನೀತಿಲಕ್ಷಣಮರ್ಥಶಾಸ್ತ್ರಂ'. ಸ್ಮೃತಿಕಾರರೆಲ್ಲರೂ ಧರ್ಮಶಾಸ್ತ್ರಕ್ಕೆ ಹೆಚ್ಚು ಮನ್ನಣೆಯನ್ನು ಕೊಡಬೇಕೆಂದು ಘೋಷಿಸಿದ್ದಾರೆ. ಇದು ' ಯತ್ರವಿಪ್ರತಿಪತ್ತಿಸ್ಯಾದ್ಧರ್ಮಶಾಸ್ತ್ರಾರ್ಥಶಾಸ್ತ್ರಯೋಃ | ಅರ್ಥಶಾಸ್ತ್ರೋಕ್ತಮುತ್ಸೃಜ್ಯ ಧರ್ಮಶಾಸ್ತ್ರೋಕ್ತಮಾಚರೇತ್ ' ಎಂಬ ವಾಕ್ಯದಿಂದ ಸ್ಪಷ್ಟಪಡುತ್ತದೆ.

ಹಿಂದೂಸಮಾಜವು ಮಾನಸಿಕ, ನೈತಿಕ ಮತ್ತು ಆಧ್ಯಾತ್ಮಿಕ ಅಸ್ತಿಭಾರದಮೇಲೆ ನಿಂತಿತ್ತೆಂಬುದೂ ಆಧ್ಯಾತ್ಮಿಕ ಸಾಧನೆಗಳಲ್ಲಿ ಪ್ರಾಚೀನಕಾಲದಲ್ಲಿ ಭಾರತವು ಎಲ್ಲಾ ಮಾನವ ವರ್ಗಗಳಿಗಿಂತಲೂ ಮುಂದಾಗಿದ್ದು ಉನ್ನತಿಯನ್ನು ಪಡೆದಿತ್ತೆಂಬ ಅಂಶವೂ ಸರ್ವಸಮ್ಮತವಾದುದು. ಸ್ವಾರ್ಥಕ್ಕಿಂತಲೂ ಪರಾರ್ಥವೇ ಮೇಲು ಎಂಬ ನಂಬಿಕೆ ಭಾರತೀಯರಲ್ಲಿ ಬಲವಾಗಿರುವುದರಿಂದ ನೀತಿ, ಶಾಂತಿ ಮುಂತಾದ ಆಧ್ಯಾತ್ಮಿಕ ತತ್ವಗಳು ಭಾರತೀಯರಿಗೆ ಆದರ್ಶಪ್ರಾಯವಾದ ಧ್ಯೇಯಗಳೆಂಬುದನ್ನು ನಮ್ಮ ಚರಿತ್ರೆಯು ಸಾರುತ್ತಾ ಬಂದಿದೆ. ತತ್ವಗಳ ಉಪದೇಶಪ್ರಭಾವದಿಂದ ಸಕಲ ವರ್ಣದವರಲ್ಲಿಯೂ ದೈವಭಕ್ತಿ, ಕರ್ತವ್ಯನಿಷ್ಠೆ, ಸ್ವಾರ್ಥತ್ಯಾಗ, ಸ್ವಧರ್ಮಪ್ರೀತಿ, ಇವೇ ಮೊದಲಾದ ಸುಗುಣಗಳು ವೃದ್ಧಿಗೊಂಡಿವೆ. ಒಟ್ಟಿನಲ್ಲಿ ಪ್ರಾಚೀನಕಾಲದಿಂದಲೂ ಭರತಖಂಡದ ಸಿದ್ಧಪುರುಷರು ರಾಜನೀತಿಯನ್ನು ಧರ್ಮ, ನೀತಿ ಮತ್ತು ತತ್ವಗಳೊಂದಿಗೆ ಸಮನ್ವಯಗೊಳಿಸಿ ರಾಜಕೀಯ ವಿಚಾರಗಳನ್ನು ಸಂಪೂರ್ಣವಾಗಿ ನೀತಿಯುತವನ್ನಾಗಿ ಮಾಡಿ ಸರ್ವರೂ ಸತ್ಯಾನ್ವೇಷಣದಲ್ಲಿ ಒಗ್ಗಟ್ಟಾಗಿ ಮುಂದುವರಿಯಬೇಕೆಂದು ಸಾರಿದ್ದಾರೆ.



೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ

೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—
ಟಿ. ಜಿ. ಸತ್ಯಗಿರಿನಾಥನ್, ಎಂ.ಎ.

೨೦. ಕಣ್ಣು ಮತ್ತು ಅದರ ರಕ್ಷಣೆ—*ಡಿ. ಶಾಮಣ್ಣ,
ಬಿ.ಎ., ಎಂ.ಬಿ.ಬಿ.ಎಸ್.

೨೧. ಸಾರ್ವಜನಿಕ ವೆಚ್ಚ—*ಎಂ. ಎಚ್. ಗೋಪಾಲ್,
ಎಂ.ಎ., ಪಿಎಚ್.ಡಿ.

೨೨. ಶಿಶುವಿಹಾರಗಳು—*ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.

೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ, ಎಂ.ಎ.

೨೪. ವಿಡಂಬನ—ಎಸ್. ವಿ. ರಂಗಣ್ಣ, ಎಂ.ಎ.

೨೫. ಅಜಂತ ಮತ್ತು ಎಲ್ಲೋರ—ಡಾ॥ ಎಂ. ಎಚ್. ಕೃಷ್ಣ,
ಎಂ.ಎ., ಡಿ.ಲಿಟ್.

೨೬. ಸಾರಜನಕದ ಮಹತ್ವ—ಎಚ್. ಸುಬ್ಬಜೋಯಿಸ್, ಎಂ.ಎಸ್‌ಸಿ.

೨೭. ಭಾಸ—ಎಚ್. ಎಲ್. ಹರಿಯಪ್ಪ, ಎಂ.ಎ.

೨೮. ಪಾಶ್ಚಾತ್ಯ ರಾಜಕೀಯತತ್ವಗಳು—
ಎಂ. ಯಾಮುನಾಚಾರ್ಯ, ಎಂ.ಎ

೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೩೦. ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್.

೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜನಾಥ್, ಎಂ.ಎ.

೩೨. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.

೩೩. ಗಣಿತಶಾಸ್ತ್ರದ ಸ್ವರೂಪ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್,
ಡಿ.ಎಸ್‌ಸಿ.

೩೪. ಋಗ್ವೇದ—ಎಂ. ಎ. ಕೃಷ್ಣಸ್ವಾಮಿ, ಎಂ.ಎ.

೩೫. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ, ಎಂ.ಎ.

೩೬. ಆಳ್ವಾರುಗಳು—ಎಂ. ಯಾಮುನಾಚಾರ್ಯ, ಎಂ.ಎ.

೩೭. ಹಿಂದುಮುಸ್ಲಿಂ ಮೈತ್ರಿಯನ್ನು ಬೆಳಸಿದ ರಾಜರು—
ವಿ. ರಾಘವೇಂದ್ರರಾವ್, ಎಂ.ಎ., ಬಿ.ಟಿ.

೩೮. ಸುಭಾಷಿತ ಸಂಗ್ರಹಗಳು- ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.

೩೯. ಮಕ್ಕಳ ಭಾವಜೀವನ- ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.

೪೦. ಸಹಕಾರ- ಎಸ್. ಗೋಪಾಲಸ್ವಾಮಿ, ಎಂ.ಎ.

೪೧. ನಯಸೇನ-ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

೪೨. ಕೌಟಿಲ್ಯ-ಎಂ. ವಿ. ಕೃಷ್ಣರಾವ್, ಎಂ.ಎ., ಬಿ.ಟಿ.

೪೩. ತೆಲುಗು ಚಾಟುಶ್ಲೋಕಗಳು-ಕೆ. ವೆಂಕಟರಾಮಪ್ಪ, ಎಂ.ಎ.

* ಈ ಪುಸ್ತಕಗಳು ಮುಗಿದುಹೋಗಿವೆ.

೧೯೪೨ ನೆಯ ಜುಲೈನಿಂದ ಮುಂದಕ್ಕೆ ಅಚ್ಚಾಗುವ ಪುಸ್ತಕಗಳ ಸಾಧಾರಣ ಪ್ರತಿ ೩ ಆಣೆ, ವಾರ್ಷಿಕ ಚಂದಾ (೮ ಪುಸ್ತಕಗಳಿಗೆ) ರೂ. ೧-೪-೦; ಉತ್ತಮ ಪ್ರತಿ ೪ ಆಣೆ; ವಾರ್ಷಿಕ ಚಂದಾ (೮ ಪುಸ್ತಕಗಳಿಗೆ) ರೂ. ೨-೦-೦.

ಸಂಪಾದಕ, ಪ್ರಚಾರಪುಸ್ತಕಮಾಲೆ,
ಯೂನಿವರ್ಸಿಟಿ ಆಫೀಸ್, ಮೈಸೂರು.